ಕನ್ನಡ ಕವಿಕಾವ್ಯಮಾಲೆ—೫೦

# ಕನ್ನಡ ಉತ್ತರರಾಮಚರಿತೆ

ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.
ಸಂಸ್ಕೃತ ಪ್ರಧಾನಾಧ್ಯಾಪಕರು
ಕೆನರಾ ಕಾಲೇಜು, ಕುಮಟಾ (ಉ.ಕ.)



ಪ್ರಕಾಶಕರು
ಶಾರದಾ ಮಂದಿರ
ಮಯ್ಯರ್ ರಸ್ತೆ, ಮೈಸೂರು

ಕನ್ನಡ ಕವಿಕಾವ್ಯಮಾಲೆ—೫೦

# ಕನ್ನಡ ಉತ್ತರರಾಮಚರಿತೆ

ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.
ಸಂಸ್ಕೃತ ಪ್ರಧಾನಾಧ್ಯಾಪಕರು
ಕೆನರಾ ಕಾಲೇಜು, ಕುಮಟಾ (ಉ.ಕ.)
ಕರ್ನಾಟಕ ವಿಶ್ವವಿದ್ಯಾನಿಲಯ







ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು :

H. M. SHANKAR NARAYAN RAO, M.A.
*Professor and Head of the Department of Kannada*
*Sarada Vilas College, Mysore*

ಮೊದಲ ಮುದ್ರಣ ೧೯೫೬
ಎರಡನೆಯ ಮುದ್ರಣ ೧೯೫೯







ಬೆಲೆ :

ಸಾಧಾರಣ ಪ್ರತಿ, ರೂ. ೨-೫೦ ನ.ಪೈ. ಕ್ಯಾಲಿಕೊ ಪ್ರತಿ, ರೂ. ೪-೦೦

ಮುದ್ರಕರು :
ವಸ್ಲಿ ಪ್ರೆಸ್, ಮೈಸೂರು

## ಸಮರ್ಪಣೆ

ವಿದ್ಯಾರವಿಂದ ವಿಕಸನ-
ಕುದ್ಯದ್ರವಿಯೆಂದು ವಿಶ್ವವಿದ್ಯಾನಿಲಯಂ
ಹೃದ್ಯಸಮಾರಂಭಂಗಳ-
ನುದ್ಯೋಜಿಸಿ ನುತಿಸುತಿರ್ಪ ಮಂಗಳಪದದೊಳ್ ೧

ಕನ್ನಡ ಕವಿತಾ ವಸುಧೆಯೊ-
ಳುನ್ನತ ಋಷಿದರ್ಶನಕ್ಕೆ ಬೆರಲೆತ್ತಿದ ಸಂ-
ಪನ್ನ ಕುವೆಂಪು ಶ್ರೀ ಗುರು
ಸನ್ನಿಧಿಯೊಳ್ ಭಕ್ತಿಭಾವದಿಂದರ್ಪಿಸುವೆಂ ೨

ಶ್ರೀ ರಾಮಾಯಣದರ್ಶನಾದಿಕ ಮಹಾ ಸಾಹಿತ್ಯ ಗಂಭೀರವಾಗ್
ಧಾರಾಸಾರದಿನಾರಲಂಕರಿಸಿದರ್ ಕರ್ಣಾಟವಾಕ್ಕಾಂತೆಯಂ
ಸಾರೋದಾರ ವಿಚಾರ ನಿರ್ಮಲ ರಸ ಪ್ರಸ್ಯಂದ ಶೋಭಾವಹಂ
ಶ್ರೀ ರಾಮಾಯಣನಾಟಕಂ ಮುಡಿಪಿದಾ ಪ್ರಾಚಾರ್ಯಪಾದಾಬ್ಜದೊಳ್ ೩

ಉತ್ತರ ರಾಮಚರಿತ್ರೋ
ಪಾತ್ತಂ ರಸಮುತ್ತಮೋತ್ತಮಂ ಕರುಣಮೆನಲ್
ಮತ್ತಿನ ಕೃತಿಗಳ ಮರೆಯಿಸಿ
ಚಿತ್ತಮನೆಳೆಯಲ್ಕೆ ನೆರೆವುದೊಂದಚ್ಚರಿಯೇ. ೪

# ಅರಿಕೆ

ಭವಭೂತಿ ಸಂಸ್ಕೃತ ನಾಟಕಕಾರರಲ್ಲಿ ಕಾಳಿದಾಸನಂತೆಯೇ ಹೆಸರಾದವನು. ಅವನ ಉತ್ತಮೋತ್ತಮ ಕೃತಿ 'ಉತ್ತರರಾಮಚರಿತೆ'. ಇಂದಿನ ಅಭಿರುಚಿಗೂ ಇದು ಗ್ರಾಹ್ಯವಾದೀತೆಂದು ಭಾವಿಸಿ ಇದನ್ನು ಯಥಾಶಕ್ತಿ ಕನ್ನಡಿಸಿದ್ದೇನೆ. ಈ ಮಹಾಕವಿಯ ಛಂದೋವೈವಿಧ್ಯಕ್ಕೂ ಭಾಷಾಸೌಂದರ್ಯಕ್ಕೂ ಲೋಪ ಬಾರದಂತೆ ಈ ಕೃತಿಯನ್ನು ಕನ್ನಡಿಸಲು ಯತ್ನಿಸಿದೆ. ಪ್ರಾಸಯಮಕಗಳಿಗಿಂತಲೂ ಅರ್ಥಗಮಕಗಳಿಗೆ ಹೆಚ್ಚಿನ ಲಕ್ಷ್ಯವೀಯಲಾಗಿದೆ. ಈ ತೆರನಾದ ಅಮರಕೃತಿಗಳನ್ನು ಕಾಲಕಾಲಕ್ಕೂ ಭಾಷಾಂತರಿಸುವ ಸತ್ಸಂಪ್ರದಾಯ ಸಹೃದಯರ ಉತ್ತೇಜನದಿಂದಲೇ ಮುಂದುವರಿದೀತು.

ಇಷ್ಟೇ ಅಲ್ಲದೆ ಈ ಅನುವಾದಕ್ಕೆ ಕವಿಪರಿಚಯವನ್ನೂ ನಾಟಕವಿಮರ್ಶೆಯನ್ನೂ ಬರೆದು ಸೇರಿಸಲಾಗಿದೆ. ಈ ವಿಷಯದಲ್ಲಿ ಡಾ|| ಬೆಳವಳಕರ, ಡಾ|| ಕಾಣೆ ಮುಂತಾದ ಪೂರ್ವಸೂರಿಗಳಿಗೆಲ್ಲ ನಾನು ಋಣಿ. ರಾಮಕಥಾತ್ಮಕವಾದ ಈ ಕೃತಿಯನ್ನು ತಮಗೆ ಅರ್ಪಿಸಲು ಅನುಮತಿಯಿತ್ತ ನನ್ನ ಪೂಜ್ಯ ಗುರುಗಳೂ ಕವಿವರ್ಯರೂ ಆದ ಡಾ|| ಕೆ. ವಿ. ಪುಟ್ಟಪ್ಪನವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಇದರ ಪ್ರಕಾಶನಕ್ಕೆ ಕಾರಣರಾದ ನನ್ನ ಪ್ರಿಯಮಿತ್ರ ಶ್ರೀ ಎಚ್. ಎಂ. ಶಂಕರನಾರಾಯಣರಾಯರ ಸಹಾಯವನ್ನು ನೆನೆಯುವುದೆಂತೋ ಕಾಣೆ.

ಕುಮಟಾ<br>೧೩-೮-೧೯೫೬

ಕೆ. ಕೃಷ್ಣಮೂರ್ತಿ

# ಸಂಪಾದಕರ ನುಡಿ

'ಉತ್ತರರಾಮಚರಿತ' ಭವಭೂತಿಯ ಶ್ರೇಷ್ಠಕೃತಿ. ಆದರೂ ಕನ್ನಡ ಜನ ಈ ಮಹಾಕವಿಗೂ ಅವನ ಕೃತಿಗಳಿಗೂ ಹೆಚ್ಚಾಗಿ ತಮ್ಮ ಗಮನವನ್ನು ಕೊಟ್ಟಂತೆ ಕಾಣುವುದಿಲ್ಲ. ಕಳೆದ ಶತಮಾನದ ಕೊನೆಯ ದಶಕದಲ್ಲಿ, ಈ ಶತಮಾನದ ಮೊದಲ ದಶಕದಲ್ಲಿ ಅವನ ಈ ಕೃತಿ ನಮ್ಮ ನುಡಿಗೆ ಅನುವಾದವಾಗಿದ್ದರೂ ಈಗ ಅವು ಅಲಭ್ಯವೆನಿಸಿವೆ. ಈ ಅಂಶವನ್ನು ಮನಸ್ಸಿಗೆ ತಂದುಕೊಂಡು, ಭವಭೂತಿಯ ಈ ನಾಟಕವನ್ನು ಕನ್ನಡಿಸಿಕೊಡಬೇಕೆಂದು ನಾನು ಪ್ರಿಯಮಿತ್ರರಾದ ಡಾ|| ಕೃಷ್ಣಮೂರ್ತಿಯವರನ್ನು ಕೇಳಿಕೊಂಡಾಗ ಅವರು ಒಪ್ಪಿ ಇದನ್ನು ಕನ್ನಡಿಸಿಕೊಟ್ಟುದಲ್ಲದೆ ವಿಸ್ತಾರವಾದ ಪೀಠಿಕೆಯನ್ನೂ ಬರೆದುಕೊಟ್ಟಿದ್ದಾರೆ. ಇದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಕವಿವರ್ಯ ಶ್ರೀ ಕುವೆಂಪುರವರ ಪಡಿಯಚ್ಚನ್ನು ಶ್ರೀ ಉ. ಕ. ಸುಬ್ಬರಾಯಾಚಾರ್ಯರು ಕೊಟ್ಟಿದ್ದಾರೆ. ಗ್ರಂಥವನ್ನು ವೆಸ್ಲಿ ಪ್ರೆಸ್ಸಿನವರು ಮುದ್ದಾಗಿ ಮುದ್ರಿಸಿದ್ದಾರೆ. ಇವರೆಲ್ಲರಿಗೂ ನಾನು ಋಣಿ.

ಕನ್ನಡಿಗರು ಈ ಕೃತಿಯನ್ನು ಆದರದಿಂದ ಬರಮಾಡಿಕೊಳ್ಳಲಿ ಎಂಬುದೇ ನನ್ನ ಹಾರೈಕೆ.

* * * *

ಈ ನಾಟಕವನ್ನು ಮೈಸೂರು ವಿಶ್ವವಿದ್ಯಾನಿಲಯದ ಡಿಗ್ರಿ ಪರೀಕ್ಷೆಗೆ (೧೯೬೦) ಪಠ್ಯಪುಸ್ತಕವನ್ನಾಗಿ ನಿಯಮಿಸಿದುದಕ್ಕಾಗಿ, ಕನ್ನಡ ಪಠ್ಯಪುಸ್ತಕ ನಿಯಾಮಕ ಸಮಿತಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಶಾರದಾಮಂದಿರ
ರಾಮಯ್ಯರ್ ರಸ್ತೆ, ಮೈಸೂರು

ಎಚ್. ಎಂ. ಶಂಕರನಾರಾಯಣರಾವ್

# ಪೀಠಿಕೆ

‘ ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ ’

ಉತ್ತರ ರಾಮ ಚರಿತ್ರೆಯೊ-
ಳುತ್ತಮ ಭವಭೂತಿ ಮೀರ್ದನೆಲ್ಲರನಿಳೆಯೊಳ್ !

## ೧. ಭವಭೂತಿಯ ದೇಶಕಾಲಾದಿ ವಿಚಾರ

೧. **ವಂಶ**—ಸಾಮಾನ್ಯವಾಗಿ ಸಂಸ್ಕೃತ ಕವಿಗಳ ಕಾಲದೇಶಾದಿಗಳ ವಿಷಯ ವಾದಗ್ರಸ್ತವಾಗಿರುವುದೇ ಹೆಚ್ಚು. ಆದರೆ ಭವಭೂತಿ ಮಾತ್ರ ಈ ಸಾಮಾನ್ಯನಿಯಮಕ್ಕೆ ಅಪವಾದದಂತಿರುವುದು ಸಂತೋಷಕರವಾದ ಸಂಗತಿ. ತನ್ನ ಕಾಲದ ವಿಷಯವಾಗಿ ಈತನೂ ಎಲ್ಲರಂತೆಯೇ ಮೌನತಾಳಿದರೂ ಕೂಡ, ತನ್ನ ವಂಶ, ಪಾಂಡಿತ್ಯಾದಿಗಳ ಬಗೆಗೆ ಕೆಲವು ವಿವರಗಳನ್ನು ತಿಳಿಸಿ ಉಪಕಾರಮಾಡಿದ್ದಾನೆ.

‘ ದಕ್ಷಿಣಾಪಥದಲ್ಲಿ ಪದ್ಮಪುರವೆಂಬ ಊರುಂಟು ; (ಇದು ವಿದರ್ಭ ರಾಜ್ಯದಲ್ಲಿ ನಾಗಪುರದ ಸಮೀಪದ ಒಂದು ಗ್ರಾಮವೆಂದು ಇಂದಿನ ವಿದ್ವಾಂಸರು ಊಹಿಸಿದ್ದಾರೆ.) ಅಲ್ಲಿ ವೇದವೇದಾಂತಪಾರಂಗತರೂ, ಪಂಕ್ತಿಪಾವನರೂ ಆದ ಪ್ರಸಿದ್ಧ ಬ್ರಾಹ್ಮಣರ ಒಂದು ವಂಶ “ ಉದುಂಬರ ”ವೆಂಬುದು. ಅವರು ಕಾಶ್ಯಪ ಗೋತ್ರದವರು ; ತೈತ್ತಿರೀಯ ಶಾಖೆಯವರು. ಅವರ ವೇದಾಧ್ಯಯನ ತತ್ತ್ವನಿರ್ಣಯಕ್ಕೆ ಮೀಸಲು ; ಹಣ ಯಾಗಕ್ಕೆ ; ವಿವಾಹ ಪುತ್ರಪ್ರಾಪ್ತಿಗೆ, ಆಯುಸ್ಸು ತಪಸ್ಸಿಗೆ. ಆ ವಂಶದಲ್ಲಿ ವಿಖ್ಯಾತನಾದ ಮಹಾಕವಿಯಿಂದ ಐದನೆಯವನು ಗೋಪಾಲಭಟ್ಟನ ಮೊಮ್ಮಗ, ನೀಲಕಂಠನ ಮಗ, ಇವನೇ ಭವಭೂತಿ. “ ಶ್ರೀಕಂಠ ”ನೆಂಬುದು ಇವನ ಬಿರುದು ; ಕವಿ ಮತ್ತು ಪದ-ವಾಕ್ಯ-ಪ್ರಮಾಣ ಶಾಸ್ತ್ರಗಳನ್ನು ಬಲ್ಲವನು. ಗುರು ಅನ್ವರ್ಥಕನಾಮಧೇಯನಾದ ಜ್ಞಾನನಿಧಿ; ತಾಯಿ ಜತುಕರ್ಣಿ ;’—ಇಷ್ಟು ಭವಭೂತಿಯೇ ತಿಳಿಸುವ ವಿಷಯ. ಭಟ್ಟ ಉಮ್ವೇಕನೆಂಬ ಮೀಮಾಂಸಕನೂ ಭವಭೂತಿಯೂ ಒಬ್ಬನೇ ವ್ಯಕ್ತಿ ; ಭವಭೂತಿಯ ಗುರು ಸುಪ್ರಸಿದ್ಧ ಕುಮಾರಿಲಭಟ್ಟರೇ, ಎಂದು ಮುಂತಾದ ಸಂಶೋಧಕರ ಊಹೆಗಳು ಇನ್ನೂ ಊಹೆಗಳಾಗಿಯೇ ಉಳಿದಿವೆ. ಶ್ರೀಕಂಠನೆಂಬುದೇ ಕವಿಯ ನಿಜವಾದ ಹೆಸರು ; ಭವಭೂತಿಯೆಂಬುದು ಬಂದ ಬಿರುದು

ಎಂದು ಹಿಂದಿನ ವ್ಯಾಖ್ಯಾನಕಾರರೆಲ್ಲರೂ ಬರೆಯುತ್ತಾರೆ. ಇದಕ್ಕೆ ಉಪಷ್ಟಂಭಕವಾಗಿ ಭವಭೂತಿಯ ರಚನೆಯೆಂದು ಹೇಳಿ—

ಕಾಂ ತಪಸ್ವೀ ಗತೋಽವಸ್ಥಾಮಿತಿ ಸ್ಮೇರಾವಿವ ಸ್ತನೌ |
ವಂದೇ ಗೌರೀಘನಾಶ್ಲೇಷ ಭವಭೂತಿಸಿತಾನನೌ ||
(ಸದುಕ್ತಿಕರ್ಣಾಮೃತ, I, XX, ೪)

ಸಾಂಬಾ ಪುನಾತು ಭವಭೂತಿಪವಿತ್ರಮೂರ್ತಿಃ
(ವೀರರಾಘವ)

ಮುಂತಾದುವನ್ನು ಉದ್ಧರಿಸುತ್ತಾರೆ. ಆದರೆ ಇವೆಲ್ಲವೂ ಉತ್ತರಕಾಲದ ಊಹೆಗಳಿರಬೇಕೆಂದು ವಿದ್ವಾಂಸರು ತಿಳಿಯುತ್ತಾರೆ, ಸತ್ಯವೆನ್ನಲು ಸಾಕಷ್ಟು ಪ್ರಮಾಣಗಳಿಲ್ಲದ ಕಾರಣ.

೨. ಕಾಲ—ಕ್ರಿ. ಶ. ೮ ನೆಯ ಶತಮಾನದ ವಾಮನನು ತನ್ನ 'ಕಾವ್ಯಾಲಂಕಾರ ಸೂತ್ರವೃತ್ತಿ'ಯಲ್ಲಿ ಭವಭೂತಿಯ ಪದ್ಯವೊಂದನ್ನು ಉದಾಹರಿಸಿದ್ದಾನೆ. ಇದೇ ಕಾಲದಲ್ಲಿ 'ಗಉಡವಹೋ' ಎಂಬ ಪ್ರಾಕೃತ ಮಹಾಕಾವ್ಯವನ್ನು ಬರೆದ ವಾಕ್ಪತಿರಾಜನು ತನ್ನ ಕಥಾರಚನೆಯ ಗುಣವಿಶೇಷಗಳು 'ಭವಭೂತಿಜಲಧಿನಿರ್ಗತ ಕಾವ್ಯಾಮೃತರಸ'ದ ಕಣಗಳಂತೆ, ಎಂದು ಭವಭೂತಿಯನ್ನು ಸ್ತುತಿಸಿದ್ದಾನೆ. ಕಾಶ್ಮೀರದ ಚರಿತ್ರೆಯನ್ನು ವರ್ಣಿಸುವ 'ರಾಜತರಂಗಿಣಿ'ಯಲ್ಲಿ ವಾಕ್ಪತಿರಾಜನಂತೆ ಭವಭೂತಿಯೂ ಯಶೋವರ್ಮನೆಂಬ ರಾಜನ ಆಶ್ರಿತರಾಗಿದ್ದರೆಂದೂ, ಅಂಥ ಯಶೋವರ್ಮನೇ ಕಾಶ್ಮೀರ ರಾಜನಾದ ಲಲಿತಾದಿತ್ಯನಿಂದ ಪರಾಜಿತನಾಗಿ ಆತನ ಸ್ತುತಿಪಾಠಕನಾಗಬೇಕಾಯಿತೆಂದೂ ತಿಳಿಸಿದೆ—

ಕವಿವಾಕ್ಪತಿರಾಜಶ್ರೀಭವಭೂತ್ಯಾದಿಸೇವಿತಃ |
ಜಿತೋ ಯಯೌ ಯಶೋವರ್ಮಾ ತದ್ಗುಣಸ್ತುತಿವಂದಿತಾಮ್ ||
(IV, ೧೪೪)

ಈ ಸಂಗತಿಯ ಯಥಾರ್ಥತೆಯನ್ನು ಪುಷ್ಟಿಗೊಳಿಸುವಂತೆ, ಯಶೋವರ್ಮನ ದಿಗ್ವಿಜಯವರ್ಣನೆಗಾಗಿ ಹೊರಟ ಮತ್ತು ಶತ್ರುವಾದ ಗೌಡರಾಜನವಧೆಯನ್ನೇ ಕುರಿತ ವಾಕ್ಪತಿರಾಜನ 'ಗೌಡವಧ ಕಾವ್ಯ'ದಲ್ಲಿ ಗೌಡರಾಜನ ವಧೆಯ ಪ್ರಸ್ತಾಪವು ಬರುವುದಕ್ಕೆ ಎಷ್ಟೋ ಮೊದಲೇ ಕಾವ್ಯ ನಿಂತುಹೋಗುತ್ತದೆ. ಆದ್ದರಿಂದ ವಾಕ್ಪತಿರಾಜನೂ ಭವಭೂತಿಯೂ ಸಮಕಾಲೀನರೆಂದೊಪ್ಪಬಹುದು. ಲಲಿತಾದಿತ್ಯನ ಕಾಲ ಕ್ರಿ. ಶ. ೭೦೦-೭೩೫. ಭವಭೂತಿಯ ಕಾಲವೂ

ಸುಮಾರು ಇದೇ ಇದ್ದಿರಬೇಕು. ಭವಭೂತಿಯ ರಚನೆಗಳಲ್ಲಿ ಕಾಳಿದಾಸನ ಭಾಷಾಸಾಮ್ಯಗಳೂ ಭಾವಸಾಮ್ಯಗಳೂ ಹಲವಾರು ಇವೆ. ಬಾಣನು ಭವಭೂತಿಯನ್ನು ಹೆಸರಿಸುವುದಿಲ್ಲ. ಈ ಅಂಶಗಳೂ ಕ್ರಿ. ಶ. ೭ ನೆಯ ಶತಮಾನದ ಅಂತ್ಯ ಮತ್ತು ೮ ನೆಯ ಶತಮಾನದ ಆದಿಯನ್ನೇ ಭವಭೂತಿಯ ಜೀವಿತ ಕಾಲವೆಂಬುದನ್ನು ಸಮರ್ಥಿಸುತ್ತವೆ.

**೩. ಪಾಂಡಿತ್ಯ**—ಭವಭೂತಿ ತನ್ನ ಪಾಂಡಿತ್ಯದ ವಿಷಯಕ್ಕೆ ಹೆಚ್ಚಾಗಿ ಹೇಳಲು ನಾಟಕದ ಪ್ರಸ್ತಾವನೆ ಸ್ಥಳವಲ್ಲವೆಂದರೂ ಪಾಂಡಿತ್ಯದ ಘನತೆಯನ್ನು ಸೂಚಿಸುತ್ತಾನೆ :—

ಯದ್ವೇದಾಧ್ಯಯನಂ ತಥೋಪನಿಷದಾಂ ಸಾಂಖ್ಯಸ್ಯ ಯೋಗಸ್ಯ ಚ
ಜ್ಞಾನಂ ತತ್ಕಥನೇನ ಕಿಂ ? ನ ಹಿ ತತಃ ಕಶ್ಚಿದ್ಗುಣೋ ನಾಟಕೇ |
(ಮಾಲತೀಮಾಧವ, I, 10)

'ವೇದ, ವೇದಾಂತ, ಸಾಂಖ್ಯ, ಯೋಗ, ಇವುಗಳಲ್ಲಿ ನನ್ನ ಜ್ಞಾನವನ್ನು ಹೇಳಿಕೊಂಡೇನು ಫಲ? ಅದರಿಂದ ನಾಟಕಕ್ಕೆ ಯಾವ ಗುಣವೂ ಇಲ್ಲ; ನಾಟಕಕ್ಕೆ ಪ್ರಸ್ತುತವಾದುದು ಕವಿಯ ರಸಿಕತೆ, ಪ್ರತಿಭೆ, ಮತ್ತು ಸಾಹಿತ್ಯದಲ್ಲಿ ವ್ಯುತ್ಪತ್ತಿ'. ಭವಭೂತಿಯೇ ಹೇಳುವಂತೆ—

'ಯತ್ಪ್ರೌಢತ್ವಮುದಾರತಾ ಚ ವಚಸಾಂ ಯಚ್ಚಾರ್ಥತೋ ಗೌರವಂ
ತಚ್ಚೇದಸ್ತಿ ತತಸ್ತದೇವ ಗಮಕಂ ಪಾಂಡಿತ್ಯವೈದಗ್ಧ್ಯಯೋಃ' ||

ಶಬ್ದದಲ್ಲಿ ಪ್ರೌಢಿ, ಅರ್ಥದಲ್ಲಿ ಗೌರವ—ಇವೇ ನಾಟಕಕಾರನ ಪಾಂಡಿತ್ಯ ವೈದಗ್ಧ್ಯಗಳಿಗೆ ಕೈಗಂಬಗಳು. ಭವಭೂತಿಗೆ ವಾಲ್ಮೀಕಿಯಲ್ಲಿ ಎಲ್ಲರಿಗಿಂತಲೂ ಹೆಚ್ಚಿನ ಭಕ್ತಿ, ಅತಿಶಯವಾದ ಗೌರವ. 'ಪ್ರಾಚೇತಸೋ ಮುನಿವೃಷಾ ಪ್ರಥಮಃ ಕವೀನಾಂ' ಎಂದು ಒಂದೆಡೆ ಹೇಳಿದರೆ (ಮಹಾವೀರಚರಿತ 1, 7), 'ಜಗನ್ಮಾತೆಯಂತೆ, ಗಂಗೆಯಂತೆ, ಈ ಕಥೆ ಪಾಪಗಳನ್ನು ತೊಳೆಯುತ್ತದೆ ಮತ್ತು ಶ್ರೇಯಸ್ಸನ್ನು ಕೊಡುತ್ತದೆ. ಇದು ಮಂಗಲಕರ ಮತ್ತು ಮನೋಹರ. ಶಬ್ದಬ್ರಹ್ಮವನ್ನು ತಿಳಿದ ಪರಿಣತಪ್ರಜ್ಞನಾದ ಆ ಮಹರ್ಷಿಯ ವಾಣಿಯನ್ನೇ ಅಭಿನಯಯೋಗ್ಯವಾಗುವಂತೆ ಮಾಡಿದ್ದೇನೆ. ವಿಬುಧರು ಪರಿಶೀಲಿಸಬೇಕು' ಎಂದು ಉತ್ತರರಾಮಚರಿತೆಯನ್ನು ಮುಗಿಸುತ್ತಾನೆ. ರಾಮಾಯಣವನ್ನೋದಿ ಓದಿ ಭವಭೂತಿಗೂ ಋಷಿದರ್ಶನ ಮೂಡಿತ್ತು, ವಾಕ್ಪ್ರಭುತ್ವ ಸಿದ್ಧಿಸಿತ್ತು.

'ಯಂ ಬ್ರಹ್ಮಾಣಮಿಯಂ ದೇವೀ ವಾಗ್ ವಶ್ಯೇವಾನುವರ್ತತೇ'

ಅವನನೀ ವಾಗ್ದೇವಿಯೆ
ಸೇವಿಸುವಳ್ ವಶ್ಯೆಯಂತೆ ತಾನಾ ಬ್ರಹ್ಮಂ (I, ೨)

ಎಂದು ಮುಕ್ತಕಂಠದಿಂದ ಹೇಳಿಕೊಳ್ಳಲು ಭವಭೂತಿಗೆ ಅಂಜಿಕೆಯಿಲ್ಲ. ತನ್ನ ಯೋಗ್ಯತೆಯನ್ನು ಅರಿಯಲಾರದ ಕ್ಷುದ್ರನಿಂದಕರನ್ನು ಕುರಿತು ನಿಸ್ಸಂಕೋಚವಾಗಿ ಸಾರುತ್ತಾನೆ—'ನಿಮ್ಮ ರಸಿಕತೆ ಇನ್ನೂ ಬೆಳೆಯಲಿಲ್ಲ; ನೀವು ನನ್ನ ಕೃತಿಯಿಂದ ದೂರವಿರಿ. ನಿಮಗಾಗಿ ನಾನು ಬರೆಯಲಿಲ್ಲ. ನನಗೆ ಸಮಾನಧರ್ಮನಾದವನು ಯಾರೊಬ್ಬನಾದರೂ ಎಂದಾದರೂ ಹುಟ್ಟಿಯಾನು. ಕಾಲ ನಿರವಧಿ; ಪೃಥ್ವಿ ಸುವಿಪುಲ':—

ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನನ್ತಿ ತೇ ಕಿಮಪಿ ತಾನ್‌ಪ್ರತಿ ನೈಷ ಯತ್ನಃ |
ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ
ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ||

ಈ ಉಕ್ತಿ ಅವಿನಯದ ಪರಮಾವಧಿಯೆಂದು ಕೆಲವರಿಗೆ ತೋರಬಹುದು. ಆದರೆ ಆತನ ಕೃತಿಯನ್ನಾಸ್ವಾದಿಸಿದವರಿಗೆ ಅದು ಆತ್ಮವಿಶ್ವಾಸವೆಂದು ಮಾತ್ರ ಭಾಸವಾಗುತ್ತದೆ.

**೪. ಕೃತಿಗಳು—** ಭವಭೂತಿಯ ಕೃತಿಗಳು ಮೂರು. ಮೂರೂ ನಾಟಕಗಳೇ :—(೧) ಮಹಾವೀರಚರಿತ, (೨) ಮಾಲತೀಮಾಧವ, (೩) ಉತ್ತರರಾಮಚರಿತ. ಮೂರರಲ್ಲಿಯೂ ಕವಿಗೆ ಚರ್ವಿತಚರ್ವಣವಾಗದ ವಿನೂತನ ಸೃಷ್ಟಿಯ ಕಡೆಗೆ ಹೆಚ್ಚಿನ ಒಲವಿದೆ. ಮೊದಲಿನದೂ ಕಡೆಯದೂ ರಾಮಾಯಣ ಕಥೆಯ ನೂತನ ಸೃಷ್ಟಿಗಳು; ನಡುವಿನದು ಕೇವಲ ಕವಿಸೃಷ್ಟಿ. ಪುರಾಣ ಕಥೆಯನ್ನು ಇದ್ದಕ್ಕಿದ್ದಂತೆ ಸಂಭಾಷಣೆಯಲ್ಲಿ ಅಳವಡಿಸಿದರೆ ನಾಟಕವಾಗುವುದಿಲ್ಲ; ಕೇವಲ ಆಕಸ್ಮಿಕ ಘಟನೆಗಳಿಂದಲೂ ಸ್ವಾರಸ್ಯ ಹೆಚ್ಚುವುದಿಲ್ಲ; ಎಲ್ಲಕ್ಕೂ ಪ್ರತಿಭಾದೃಷ್ಟಿಯಿಂದ ಸಾಮಂಜಸ್ಯವೂ, ಕಾರ್ಯಕಾರಣ ಭಾವವೂ ಒದಗುವಂತೆ ಯಥೋಚಿತ ಬದಲಾವಣೆಗಳನ್ನು ಮಾಡುವುದೇ ನಾಟಕದ ಮರ್ಮವೆಂಬುದು ಭವಭೂತಿಗೆ ಅನ್ಯಾದೃಶವಾಗಿ ಮನವರಿಕೆಯಾಗಿತ್ತು. ನಾಟಕದಲ್ಲಿ ರಸಾಭಿವ್ಯಕ್ತಿಗೆ ಪರಮೋಚ್ಚ ಪೀಠವೆಂಬುದು ಅವನಿಗೆ ಹೃದ್ಗತವಾಗಿತ್ತು. ನಾಟಕದ ಸದಾತನ ಸ್ವಾರಸ್ಯಕ್ಕೆ ಸಾರ್ವಕಾಲಿಕವಾದ ಜೀವನಮೀಮಾಂಸೆ ಅಗತ್ಯವೆಂಬುದೂ ತಿಳಿದಿತ್ತು. ವೀರರಸ ಪ್ರಧಾನವಾಗುವಂತೆ ಮಹಾವೀರಚರಿತೆಯನ್ನೂ ಕರುಣರಸ ಪ್ರಧಾನವಾಗುವಂತೆ ಉತ್ತರರಾಮಚರಿತೆಯನ್ನೂ

ಭವಭೂತಿ ರಚಿಸಿದ್ದಾನೆ. ಮಹಾವೀರಚರಿತೆಯಲ್ಲಿ ರಾಮ ಸುಮ್ಮನೆ ಒಬ್ಬ ಸಾಹಸಿಯಲ್ಲ; ಸಾರ್ವಕಾಲಿಕವಾದ ಧರ್ಮದ ಪ್ರತಿನಿಧಿ; ರಾವಣನು ಕೇವಲ ಒಬ್ಬ ನೀಚರಾಕ್ಷಸನಲ್ಲ, ಧರ್ಮದ್ರೋಹಿ. ರಾಮನ ಎಡರು ತೊಡರುಗಳು ಕೇವಲ ವಿಧಿವಿಲಾಸದಿಂದ ಬರತಕ್ಕವಲ್ಲ; ರಾವಣನ ಪಕ್ಷದವರ ಬುದ್ಧಿಯೋಜನೆಯಿಂದಲೇ ಸಂಘಟಿಸತಕ್ಕವು. ಹೀಗೆ ವಸ್ತುಸಂವಿಧಾನ, ಪಾತ್ರ ಚಿತ್ರಣ, ಜೀವನಮೀಮಾಂಸೆ, ಮೂರರಲ್ಲೂ ನೈಪುಣ್ಯವನ್ನು ಭವಭೂತಿ ತನ್ನ ಪ್ರಥಮಕೃತಿಯಲ್ಲಿಯೇ ತೋರಿಸಿದ್ದಾನೆ. ಎರಡನೆಯ ಕೃತಿಯಾದ 'ಮಾಲತೀ ಮಾಧವ' ಶೃಂಗಾರರಸದ ಪ್ರತಿಪಾದನೆಗೆ ಮೀಸಲಾದುದು. ಇದಾದರೂ ರಾಜರ ಅಂತಃಪುರಗಳಲ್ಲಿ ನಡೆಯುವ ವಿಲಾಸಿಗಳ ಅತಿರಂಜಿತ ಶೃಂಗಾರವಲ್ಲ; ನಿತ್ಯಜೀವನದಲ್ಲಿ ಪ್ರಭುತ್ವ ನಡೆಸುವ ಪ್ರಣಯಪ್ರಪಂಚ. ಅಂತಃಪುರದ ಕೃತ್ರಿಮ ಆವರಣದಲ್ಲಿ ಎಡೆಯಿಲ್ಲದ ಅದ್ಭುತ ಸಾಹಸ ಬೀಭತ್ಸಗಳಿಗೂ ಇಲ್ಲಿ ಯಥೋಚಿತವಾಗಿ ಪ್ರವೇಶವುಂಟು. ಹೀಗೆ ಭವಭೂತಿಯ ಪ್ರಥಮ ಕೃತಿಗಳಲ್ಲಿ ಗುಣಬಾಹುಲ್ಯವಿದ್ದರೂ ಎಲ್ಲವನ್ನೂ ಮರೆಸಿಬಿಡುವಷ್ಟು ಮಟ್ಟಿಗೆ ಅವನ ವರ್ಣನಾವ್ಯಾಮೋಹ ಹೆಚ್ಚಾಗಿದೆ. ಒಂದು ಮಾತನ್ನಾಡುವ ಕಡೆ ಹದಿನೆಂಟನ್ನು ಘನಗಂಭೀರವಾಗಿ ವಿಸ್ತರಿಸಿದಲ್ಲದೆ ಅವನಿಗೆ ತೃಪ್ತಿಯಿಲ್ಲ. ನಾಟಕದ ಕ್ರಿಯೆ ಮಿಂಚಿನಂತೆ ಓಡುವ ಬದಲು ರಾಜಮತಂಗಜದಂತೆ ನಿಂತು ನಿಂತು ಸಾಗುತ್ತದೆ. ಎಷ್ಟೋ ವೇಳೆ ಇದು ಆಡುಗಬ್ಬವಾದ ನಾಟಕವೋ ಅಥವಾ ಓದುಗಬ್ಬವಾದ ಮಹಾಕಾವ್ಯವೋ ಎಂಬ ಭ್ರಮೆಯೇ ಬರುವಂತಾಗುತ್ತದೆ. ಅರ್ಥದೃಷ್ಟಿ ತಪ್ಪದಿದ್ದರೂ, ಶಬ್ದಚಮತ್ಕಾರದ ಅತಿಪ್ರೇಮ ಹೆಚ್ಚಾಗುವುದು ಅಂದಿನ ವಿದ್ವಜ್ಜನರ ಅಭಿರುಚಿಯ ಫಲವಾಗಿದ್ದರೂ ಆಗಿರಬಹುದು. ಶಬ್ದಸಾರ್ವಭೌಮನೂ ಪಂಡಿತಪ್ರಕಾಂಡನೂ ಆದ ಭವಭೂತಿ ವಿದ್ವಾಂಸರನ್ನು ನಿಬ್ಬೆರಗಾಗಿಸಲು ಹೀಗೆ ಬರೆದಿರಬಹುದು. ಆದರೆ ಕಡೆಯ ಕೃತಿಯಾದ ಉತ್ತರರಾಮಚರಿತೆಯನ್ನು ಬರೆಯುವ ಹೊತ್ತಿಗೆ ಭವಭೂತಿಯ ಪ್ರಜ್ಞೆ ಪರಿಪಕ್ವವಾಗಿತ್ತು; ಅನುಭವ ಮತ್ತೂ ಆಳವಾಗಿತ್ತು; ವರ್ಣನಾವ್ಯಾಮೋಹ ಕಡಿಮೆಯಾಗಿತ್ತು. ಅಂದಿನ ವರೆಗೆ ಯಾರೂ ಸಾಧಿಸದ ಮಹಾ ಕೆಲಸವನ್ನು—ಕರುಣರಸ ಪ್ರತಿಪಾದನೆಯನ್ನು—ಭವಭೂತಿ ಅದ್ವಿತೀಯವಾಗಿ ಸಾಧಿಸಿದನು. ಕಾಳಿದಾಸನ ಸರಿದೊರೆಯೆನಿಸಿಕೊಂಡನು. ಇದರ ವಿಮರ್ಶೆ ಮುಂದೆ ವಿವರವಾಗಿ ಬರುತ್ತದೆ. [ಮೂರೂ ಕೃತಿಗಳ ಸಮಗ್ರ ಪರಿಚಯಕ್ಕೆ ಇದೇ ಲೇಖಕನ 'ಭವಭೂತಿ', ಎಂಬ ಪ್ರಚಾರೋಪನ್ಯಾಸ (ಕರ್ಣಾಟಕ ವಿಶ್ವವಿದ್ಯಾಲಯ) ವನ್ನು ನೋಡಬಹುದು.]

## ೨. ಉತ್ತರರಾಮಚರಿತೆಯ ಕಥಾವಸ್ತು

**ಅಂಕ ೧**—ಶ್ರೀರಾಮನು ಸೀತಾಸಮೇತನಾಗಿ ಅಯೋಧ್ಯೆಗೆ ತಿರುಗಿ ಬಂದು ಪಟ್ಟಾಭಿಷಿಕ್ತನಾಗಿದ್ದಾನೆ. ಮಹೋತ್ಸವಕ್ಕಾಗಿ ಬಂದಿದ್ದ ಅತಿಥಿಗಳೆಲ್ಲ—ಜನಕ ಹನುಮಂತ, ವಿಭೀಷಣ, ಸುಗ್ರೀವ, ಇತ್ಯಾದಿ—ತಮ್ಮ ತಮ್ಮ ಊರುಗಳಿಗೆ ಮರಳಿದ್ದಾರೆ. ವಸಿಷ್ಠ, ಅರುಂಧತಿ, ರಾಮನ ತಾಯಂದಿರು—ಎಲ್ಲರೂ ಅಳಿಯ ಋಷ್ಯಶೃಂಗ ಆರಂಭಿಸಿದ್ದ ಹನ್ನೆರಡು ವರ್ಷದ ಅವಧಿಯ ಯಾಗಕ್ಕೆ ಅನಿವಾರ್ಯವಾಗಿ ಹೋಗಬೇಕಾಯಿತು. ತುಂಬಿದ ಬಸುರಿಯಾದ್ದರಿಂದ ಸೀತೆಯನ್ನು ಜತೆಗೆ ಕರೆದುಕೊಂಡು ಹೋಗುವಂತಿರಲಿಲ್ಲ. ಋಷ್ಯಶೃಂಗನ ಆಶ್ರಮದಿಂದಲೇ ಹಿರಿಯರು ನೂತನರಾಜನಿಗೆ ಬುದ್ಧಿವಾದ ಹೇಳಿ ಕಳುಹಿಸಿದ್ದಾರೆ ಅಷ್ಟಾವಕ್ರನ ಮೂಲಕ:—(೧) 'ಬಸುರಿಯ ಬಯಕೆಯನ್ನು ಏನೇ ಇದ್ದರೂ ತೀರಿಸಬೇಕು.' (೨) 'ಪ್ರಜೆಗಳ ರಂಜನೆಯೊಂದೇ ರಾಜನ ಹೆಗ್ಗುರಿಯಾಗಿರಬೇಕು.' ಸೀತೆಗೆ ವೀರಮಾತೆಯೆನಿಸೆಂಬ ಆಶೀರ್ವಾದವನ್ನೂ ವಸಿಷ್ಠರು ಮಾಡಿದ್ದಾರೆ. ಎಲ್ಲರನ್ನೂ ಅಗಲಿದ ಸೀತೆಗೆ ತುಂಬಾ ಬೇಸರವಾಗಿದೆ. ರಾಮನು ಆಕೆಯ ಮನೋರಂಜನೆಗಾಗಿ ತಮ್ಮ ಪೂರ್ವಚರಿತವನ್ನೆಲ್ಲ ಚಿತ್ರರೂಪವಾಗಿ ಬರೆಯಿಸಿದ್ದಾನೆ. ಚಿತ್ರಶಾಲೆಯಲ್ಲಿ ಅವಳಿಗೆ ಒಂದೊಂದನ್ನೂ ಲಕ್ಷ್ಮಣನು ತೋರಿಸುತ್ತಾ ಬರುತ್ತಾನೆ. (೧) ಜೃಂಭಕಾಸ್ತ್ರಗಳು ; (ಇವನ್ನು ನೋಡುವಾಗ ಶ್ರೀರಾಮನು ಸೀತೆಯ ಪುತ್ರರಿಗೂ ಅವು ಸಿದ್ಧಿಸುವಂತೆ ಹರಸುತ್ತಾನೆ.) (೨) ಮಿಥಿಲೆಯಲ್ಲಿ ವಿವಾಹಮಹೋತ್ಸವ, (೩) ರಾಮ-ಪರಶುರಾಮರ ಸಂಘರ್ಷ, (೪) ಮಂಥರಾವೃತ್ತಾಂತ, (೫) ಶೃಂಗಬೇರಪುರದಲ್ಲಿ ಮರದ ಕೆಳಗೆ ಗುಹನ ಸ್ನೇಹ, (೬) ಜಟಾಧಾರಣ, (೭) ಭಾಗೀರಥೀ (ಸೀತೆಯನ್ನು ಸೊಸೆಯಂತೆಯೇ ಸಂರಕ್ಷಿಸಬೇಕೆಂದು ರಾಮನು ಆ ಕುಲದೇವತೆಯನ್ನು ಪ್ರಾರ್ಥಿಸುತ್ತಾನೆ), (೮) ಶ್ಯಾಮವೆಂಬ ವಟವೃಕ್ಷ, (೯) ವಿರಾಧನೊಡನೆ ಯುದ್ಧ, (೧೦) ದಂಡಕಾರಣ್ಯಾಪ್ರವೇಶ, (೧೧) ಪ್ರಸ್ರವಣವೆಂಬ ಪರ್ವತ, (೧೨) ಶೂರ್ಪಣಖಾ ಪ್ರಸಂಗ, (೧೩) ಸೀತಾಪಹರಣ, (೧೪) ಜಟಾಯು ಮರಣ, (೧೫) ಚಿತ್ರಕೂಟ, (೧೬) ಋಷ್ಯಮೂಕದಲ್ಲಿ ಮತಂಗಾಶ್ರಮ, (೧೭) ಶಬರೀ ವೃತ್ತಾಂತ, (೧೮) ಪಂಪಾಸರೋವರ, (೧೯) ಹನುಮಂತನ ದರ್ಶನ, (೨೦) ಮಾಲ್ಯವತ್ ಪರ್ವತ. ಹೀಗೆಯೇ ಸೀತೆಯ ಅಗ್ನಿಶುದ್ಧಿಯ ವರೆಗೂ ಚಿತ್ರಗಳಿದ್ದರೂ, ವನವಾಸದ ವಿರಹಶೋಕದ ನೆನಪನ್ನೇ ತೀವ್ರವಾಗಿ ತರುತ್ತಿದ್ದ ಇಷ್ಟನ್ನು ನೋಡುವ ಹೊತ್ತಿಗೆ ರಾಮ

ನಿಗೇ ಪ್ರಯಾಸವಾಯಿತು; ಸೀತೆಯ ದುಗುಡ ಬಳಲಿಕೆಗಳು ಮಿತಿಮೀರಿ ನಿದ್ದೆ ಬರುವಂತಾಯಿತು. ಭಾಗೀರಥಿಯ ತೀರದ ತಪೋವನಗಳಲ್ಲಿ ಮತ್ತೊಮ್ಮೆ ಸುಳಿದಾಡಬೇಕೆಂಬ ಬಯಕೆಯೂ ಉಂಟಾಯಿತು. ಕೂಡಲೇ ಆಕೆಯ ಬಯಕೆಯನ್ನೀಡೇರಿಸುವಂತೆ ಲಕ್ಷ್ಮಣನಿಗೆ ರಾಮನ ಆಜ್ಞೆಯಾಗುತ್ತದೆ. ರಥವನ್ನು ತರಲು ಅವನು ಹೋಗುತ್ತಾನೆ. ಸೀತೆ ರಾಮನ ತೋಳ ಮೇಲೆಯೇ ಒರಗಿ ನಿದ್ದೆಹೋಗುತ್ತಾಳೆ. ರಾಮನು ತನ್ನ ಪ್ರೇಮಾನಂದದಲ್ಲಿ ಮುಳುಗಿ ತೇಲುತ್ತಿರುವಾಗಲೇ ಗೂಢಚಾರನಾದ ದುರ್ಮುಖನು ಬಂದು ಅಯೋಧ್ಯೆಯ ಪುರಜನರು ಸೀತೆಯ ಚಾರಿತ್ರದ ವಿಷಯದಲ್ಲಿ ಸಂಶಯಪಡುವ ಮಾತನ್ನು ಬಂದು ಅರುಹುತ್ತಾನೆ. ರಾಮನಿಗೆ ಈ ವಜ್ರಾಘಾತ ತಡೆಯುವಂತಿರಲಿಲ್ಲ; ಮೂರ್ಛೆ ಬೀಳುತ್ತಾನೆ. ಎದ್ದವನಿಗೆ ದಿಗ್ಭ್ರಮೆ ಹಿಡಿದಂತಾಗಿದೆ. ಪ್ರಜೆಗಳ ಸಲುವಾಗಿ ಸೀತೆಯ ಪರಿತ್ಯಾಗ ಮಾಡಿದಲ್ಲದೆ ಸೂರ್ಯವಂಶದ ಕುಲವ್ರತ ಉಳಿಯುವಂತಿರಲಿಲ್ಲ. ತನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಸೀತೆಯನ್ನು ಕಟುಕನಂತೆ ಕಾಡುಮೃಗಗಳಿಗೆ ಕೊಡುವ ದುಸ್ಸಹ ಕಾರ್ಯವನ್ನು ಮಾಡುವುದಕ್ಕೂ ಅವನು ಎದೆಯನ್ನು ಗಟ್ಟಿಮಾಡಿಕೊಳ್ಳುತ್ತಾನೆ. ಲಕ್ಷ್ಮಣನಿಗೆ ಕಟ್ಟಾಜ್ಞೆ ವಿಧಿಸಿ ಕಳುಹಿಸುತ್ತಾನೆ. ಇಷ್ಟರಲ್ಲಿ ಲವಣಾಸುರನ ಕೋಟಲೆಯ ಸುದ್ದಿ ಬರಲು, ಶತ್ರುಘ್ನನನ್ನು ಅವನ ಮೇಲೆ ದಂಡೆತ್ತಿಹೋಗುವಂತೆ ನಿಯಮಿಸುತ್ತಾನೆ. ಸೀತೆಯನ್ನು ಮುಟ್ಟುವುದಕ್ಕೂ ತಾನು ಅನರ್ಹನೆಂದು ಬೈದುಕೊಳ್ಳುತ್ತಾ ಅವಳನ್ನು ಕೆಳಗೆ ಮಲಗಿಸಿ ರಾಮನು ಹೊರಟುಹೋಗುತ್ತಾನೆ. ಎದ್ದ ಸೀತೆಯನ್ನು ತಡವೇ ಇಲ್ಲದೆ ಲಕ್ಷ್ಮಣನು ರಥದಲ್ಲಿ ಹತ್ತಿಸಿಕೊಂಡು ಹೋಗುತ್ತಾನೆ.

**ಅಂಕ ೨**—ಸೀತಾಪರಿತ್ಯಾಗವಾಗಿ ಹನ್ನೆರಡು ವರ್ಷಗಳು ಕಳೆದಿವೆ. ಪಂಚವಟಿಯಲ್ಲಿ ವನದೇವತೆಯಾದ ವಾಸಂತಿಯೂ ವಾಲ್ಮೀಕಿಯ ಆಶ್ರಮದಲ್ಲಿ ಅಧ್ಯಯನ ಮುಗಿಯದೆ ಅಗಸ್ತ್ಯಾಶ್ರಮಕ್ಕಾಗಿ ಬಂದಿರುವ ಆತ್ರೇಯಿಯೂ ಮಾತನಾಡುವಾಗ ಈ ಹನ್ನೆರಡು ವರ್ಷಗಳ ಅವಧಿಯಲ್ಲಿ ಆಗಿರುವ ಮುಖ್ಯ ಘಟನೆಗಳು ತಿಳಿಯುತ್ತವೆ. ಬ್ರಹ್ಮನ ಸಲಹೆಯಂತೆ ವಾಲ್ಮೀಕಿ ಮಹರ್ಷಿಗಳು ರಾಮಾಯಣವನ್ನು ಶ್ಲೋಕರೂಪವಾಗಿ ಬರೆದಿದ್ದಾರೆ. ಹನ್ನೆರಡು ವರ್ಷಗಳಿಂದಲೂ ಲವಕುಶರು ವಾಲ್ಮೀಕಿಗಳ ಆಶ್ರಮದಲ್ಲಿಯೇ ಬೆಳೆಯುತ್ತಿದ್ದಾರೆ. ಅವಳಿಜವಳಿಗಳಾದ ಆ ಮಕ್ಕಳಿಗೆ ಋಷಿಗಳೇ ಕ್ಷತ್ರಿಯ ವಿದ್ಯೆಗಳನ್ನೆಲ್ಲ ಕಲಿಸಿದ್ದಾರೆ. ಸೀತೆಯ ಬದಲಿಗೆ ಸೀತೆಯ ಸುವರ್ಣ ಪ್ರತಿಮೆಯನ್ನಿಟ್ಟುಕೊಂಡು ರಾಮನು ಅಶ್ವಮೇಧಯಾಗ ಮಾಡಲು ತೊಡಗಿದ್ದಾನೆ. ಲಕ್ಷ್ಮಣನ ಮಗ

ಚಂದ್ರಕೇತುವಿನ ಬೆಂಗಾವಲಿನಲ್ಲಿ ಯಜ್ಞದ ಕುದುರೆ ಹೋಗಿದೆ. ಅಕಾಲ ಮೃತ್ಯುವಿಗೆ ಗುರಿಯಾದ ಬ್ರಾಹ್ಮಣಬಾಲಕನೊಬ್ಬನನ್ನು ಬದುಕಿಸಲು ಶ್ರೀರಾಮನು ಶೂದ್ರತಪಸ್ವಿಯಾದ ಶಂಬೂಕನ ವಧೆಗಾಗಿ ಅದೇ ದಂಡಕಾರಣ್ಯಕ್ಕೆ ಪುಷ್ಪಕ ವಿಮಾನದಲ್ಲಿ ತೆರಳಿದ್ದಾನೆ.

ಶಂಬೂಕವಧೆಯಾಯಿತು. ದೇವಸ್ವರೂಪವನ್ನು ತಳೆದ ಶಂಬೂಕನು ರಾಮನನ್ನು ಕೊಂಡಾಡಿ ಆ ಪೂರ್ವಪರಿಚಿತವಾದ ವನಾಂತಪ್ರದೇಶ ಗಳೊಂದೊಂದನ್ನೂ ತೋರಿಸುತ್ತಾನೆ. ರಾಮನ ವಿರಹಾಗ್ನಿ ಪ್ರದೀಪ್ತ ವಾಗುತ್ತದೆ. ಪಂಚವಟಿಯೊಳಕ್ಕೆ ಕಾಲಿಡಬೇಕೋ ಬೇಡವೋ ಎಂದು ಅನುಮಾನಿಸುತ್ತಿರುವ ರಾಮನಿಗೆ ಅಗಸ್ತ್ಯರಿಂದ ತಮ್ಮ ಆಶ್ರಮಕ್ಕೆ ಬಂದೇ ಹೋಗಬೇಕೆಂಬ ಸಂದೇಶ ಶಂಬೂಕನ ಮೂಲಕ ಬರುತ್ತದೆ. ರಾಮನು ಅತ್ತ ಹೊರಡುತ್ತಾನೆ.

ಅಂಕ ೩—ಅಗಸ್ತ್ಯರ ಪತ್ನಿಯಾದ ಲೋಪಾಮುದ್ರೆಗೆ ರಾಮನ ದಾರುಣ ಶೋಕ ಮರಣಾಂತಕವಾದೀತೋ ಎಂಬ ಭಯವಿದೆ-ನಿಸ್ಸಹಾಯನಾಗಿ ಅವನು ಪಂಚವಟೀ ಪರಿಸರದಲ್ಲಿ ಕಾಲಿಟ್ಟರೆ. ಆದ್ದರಿಂದ ಆಕೆ ಮೊದಲೇ ತಂಗಾಳಿ ಯನ್ನು ತಪ್ಪದೆ ಬೀಸುತ್ತಾ ನೋಡಿಕೊಳ್ಳಬೇಕೆಂದು ಗೋದಾವರಿಗೆ ಹೇಳಿ ಕಳುಹಿಸಿದ್ದಾಳೆ. ಭಾಗೀರಥಿಯೂ ಕೂಡ ರಾಮನ ಜನಸ್ಥಾನಪ್ರಯಾಣ ವನ್ನು ತಿಳಿದವಳೇ ಅಲ್ಲಿಯ ವರೆಗೂ ಪಾತಾಳದಲ್ಲಿರುತ್ತಿದ್ದ ಸೀತೆಯನ್ನು ಅದೃಶ್ಯಳಾಗಿದ್ದುಕೊಂಡೇ ರಾಮನ ಉಪಚಾರ ಮಾಡುವ ಸಲುವಾಗಿ ಅಲ್ಲಿಗೆ ಕರೆತಂದಿದ್ದಾಳೆ. ಸೀತೆಗೂ ವಿಷಯವನ್ನು ತಿಳಿಸಿಲ್ಲ. ಮಕ್ಕಳಾದ ಲವಕುಶರ ಮಂಗಳಕರ್ಮದ ಅಂಗವಾಗಿ ಸೂರ್ಯೋಪಾಸನೆ ನಡೆಯಬೇಕೆಂಬ ನೆವ ಹೇಳಿದ್ದಾಳೆ. ರಾಮನ ಹೃದಯವನ್ನರಿತು ಸೀತೆಗೆ ಸ್ವಲ್ಪವಾದರೂ ದುಃಖಶಮನವಾದೀತೆಂಬುದೂ ಅವಳ ಅಂತರಂಗ. ಈ ದುರ್ಭರ ಸನ್ನಿವೇಶ ದಲ್ಲಿ ಸೀತೆಯನ್ನು ಉಪಚರಿಸಲು ತಮಸಾನದಿಯನ್ನು ಕಳುಹಿಸಿದ್ದಾಳೆ.

ಸೀತೆ ಹೂಕೊಯ್ಯುತ್ತಿರುವಾಗ ವಾಸಂತಿ 'ಕಾಪಾಡಿ' 'ಕಾಪಾಡಿ' ಎಂದು ಕೂಗಿಕೊಳ್ಳುತ್ತಾಳೆ. ಸೀತೆ ಸಾಕಿದ್ದ ಆನೆಮರಿ (ದೊಡ್ಡದಾಗಿ) ಹೆಣ್ಣಿನೊಡನೆ ಸರಸವಾಡುತ್ತಿರುವಾಗಲೇ ಮದ್ದಾನೆ ಅದನ್ನು ಕೊಲ್ಲಬಂದಿದೆ. ರಾಮನು ಅದರ ರಕ್ಷಣೆಗೆ ಬರುವ ಮೊದಲೇ ಅದು ಮದ್ದಾನೆಯನ್ನು ಸೋಲಿಸಿಯಾಗಿದೆ. ಸೀತೆಗೆ ಆನೆಯನ್ನು ಕಂಡು ಮಕ್ಕಳ ನೆನಪು ಮೂಡುತ್ತದೆ. ರಾಮನಿಗೆ ಒಂದೊಂದು ಪರಿಚಿತದೃಶ್ಯವನ್ನು ಕಾಣುವಾಗಲೂ ದುಃಖವು ಒತ್ತಿಬಂದು ಪದೇ ಪದೇ ಮೂರ್ಛೆಬೀಳುತ್ತಾನೆ. ಸೀತೆಯನ್ನು ನೆನೆನೆನೆದು

ಹಂಬಲಿಸುತ್ತಾನೆ. ಅದೃಶ್ಯಳಾದ ಸೀತೆ ಬಂದು ತನ್ನ ಸ್ಪರ್ಶದಿಂದ ಅವನನ್ನು ಬದುಕಿಸುತ್ತಾಳೆ. ವಾಸಂತಿ ರಾಮನನ್ನು ಕಠೋರಹೃದಯನೆಂದು ಚುಚ್ಚಿ ಚುಚ್ಚಿ ಮತ್ತಷ್ಟು ಗೋಳಾಡಿಸುತ್ತಾಳೆ. ಸೀತೆಗೆ ರಾಮನ ಪ್ರೇಮದ ಆಳವು ಸ್ಪಷ್ಟ ವಾಗುತ್ತದೆ. ರಾಮನು ಯಾಗದಲ್ಲೂ ಸೀತೆಯ ಪ್ರತಿಮೆಯನ್ನೇ ನಂಬಿರುವುದು ಸೀತೆಗೆ ಎಷ್ಟೋ ಸಮಾಧಾನವನ್ನು ತರುತ್ತದೆ. ರಾಮನು ಅಯೋಧ್ಯೆಗೂ ಸೀತೆಯು ಪಾತಾಳಕ್ಕೂ ಹಿಂದಿರುಗುತ್ತಾರೆ.

**ಅಂಕ ೪**—ಇತ್ತ ಋಷ್ಯಶೃಂಗನ ಯಾಗವೂ ಸಮಾಪ್ತಿಯಾಗಿದೆ. ವಸಿಷ್ಠ, ಅರುಂಧತಿ, ಕೌಸಲ್ಯೆ—ಯಾರಿಗೂ ಸೀತೆಯಿಲ್ಲದ ಅಯೋಧ್ಯೆಗೆ ಮರಳುವ ಮನಸ್ಸೇ ಇಲ್ಲ. ಅವರೆಲ್ಲರೂ ವಾಲ್ಮೀಕಿಗಳ ಆಶ್ರಮಕ್ಕೆ ಬರುತ್ತಾರೆ. ಜನಕನೂ ಅಲ್ಲಿಗೇ ಬರುತ್ತಾನೆ. ಇಷ್ಟರಲ್ಲಿ ರಾಮನ ಯಜ್ಞಾಶ್ವವೂ ಚಂದ್ರಕೇತುವಿನ ಕಾಪಿನಲ್ಲಿ ಅಲ್ಲಿಗೆ ಬರುತ್ತದೆ. ಹುಡುಗರೆಲ್ಲರೂ ಹಿರಿಯರ ಆಗಮನದಿಂದ ತಮಗೆ ರಜೆ ಸಿಕ್ಕಿತೆಂದು ಆಡುತ್ತಿದ್ದಾರೆ. ಲವನನ್ನು ಕಂಡ ಜನಕಾದಿಗಳು ರಾಮ ಸಾದೃಶ್ಯವನ್ನು ಅರಿತು ಹೆಚ್ಚು ಕುತೂಹಲಿಗಳಾದರೂ ಲವನು ಹುಡುಗ ರೊಡನೆ ಕುದುರೆಯನ್ನು ನೋಡಲು ಓಡಿಬಿಡುತ್ತಾನೆ. ಅವನು ತಿಳಿಸುವುದು ಒಂದೇ ಮಾತು—'ತನಗೆ ಕುಶನೆಂಬಣ್ಣನೂ ಉಂಟು. ರಾಮಾಯಣದ ಕಾವ್ಯ ಸೀತಾಪರಿತ್ಯಾಗದಿಂದಲೇ ಸಮಾಪ್ತಿಯಾಗುತ್ತದೆ. ಆದರೆ ಅದರ ಮುಂದಿನ ಭಾಗ ಕಾವ್ಯರೂಪದಲ್ಲಿರದೆ ನಾಟಕರೂಪದಲ್ಲಿದೆ. ಅದರ ಪ್ರತಿಯನ್ನು ನಾಟ್ಯಾಚಾರ್ಯನಾದ ಭರತನಿಗೆ ಆಡಿಸುವ ಸಲುವಾಗಿ ವಾಲ್ಮೀಕಿಗಳೇ ಕುಶನ ಕೈಯಲ್ಲಿ ಕೊಟ್ಟು ಕಳುಹಿಸಿದ್ದಾರೆ' ಎಂದು. ವಾಲ್ಮೀಕಿ ಕೂಡ ಆಗಲೇ ಅವರ ಕುತೂಹಲವನ್ನು ಶಾಂತಮಾಡುವುದಿಲ್ಲ. ಅಂತಹ ಪ್ರಶಾಂತ ತಪೋನಿಧಿ ಯಾದ ಜನಕನಿಗೂ ರಾಮನ ಅಪರಾಧ ಅಕ್ಷಮ್ಯವೆಂಬ ಭಾವನೆಯೇ ಇನ್ನೂ ಇದೆ. ಚಂದ್ರಕೇತುವಿನ ಸೈನಿಕರ ವೀರಘೋಷಣೆಗಳಿಂದ ಕೆರಳಿದ ಲವನು ಯಜ್ಞಾಶ್ವವನ್ನು ಕಟ್ಟಿಹಾಕುತ್ತಾನೆ.

**ಅಂಕ ೫**—ಲವನು ಸೈನಿಕರೊಡನೆ ಯುದ್ಧಮಾಡಲು ಹಿಂದೆಗೆಯುವುದಿಲ್ಲ. ಕ್ಷಣಾರ್ಧದಲ್ಲಿ ಅವರೆಲರನ್ನೂ ಸೋಲಿಸುತ್ತಾನೆ. ಇದನ್ನು ಕೇಳಿದ ಚಂದ್ರಕೇತುವೇ ಸುಮಂತ್ರನು ನಡೆಯಿಸುತ್ತಿದ್ದ ರಥದಲ್ಲಿ ಧಾವಿಸಿ ಲವನ ಮೇಲೇರಿ ಬರುತ್ತಾನೆ. ಏಕಾಂಗವೀರನಾದ ಲವನು ಸೈನ್ಯವನ್ನೆಲ್ಲ ಜೃಂಭಕಾ ಸ್ತ್ರದ ಬಲದಿಂದ ನಿಶ್ಚೇಷ್ಟಗೊಳಿಸಿ ಚಂದ್ರಕೇತುವಿನ ಯುದ್ಧಾಹ್ವಾನವನ್ನು ಅಂಗೀಕರಿಸುತ್ತಾನೆ. ಕಣ್ಣರಿಯದಿದ್ದರೂ ಅವರಿಬ್ಬರ ಕರುಳರಿಯುವುದರಿಂದ ಇಬ್ಬರೂ ಯುದ್ಧವಿಮುಖರೇ ಆಗಿದ್ದಾರೆ. ಸುಮಂತ್ರನಿಗೂ ಲವನನ್ನು

ನೋಡಿದೊಡನೆ ರಾಮನ ಹೋಲಿಕೆಗಳು ಕಾಣುತ್ತವೆ. ಆದರೆ ಸೀತೆಯೇ ಇಲ್ಲದಾಗ ರಾಮನಿಗೆ ಮಗನೆಂತು ಎಂಬ ಚಿಂತೆ. ಇಷ್ಟರಲ್ಲಿ ವೀರರಿಬ್ಬರಿಗೂ ಮಾತಿಗೆ ಮಾತು ಬೆಳೆದು ಶ್ರೀರಾಮನು ಕೂಡ ಲೋಕೈಕವೀರನಲ್ಲವೆಂದು ಲವನು ದಿಟ್ಟತನದಿಂದ ಆಡಿ ತೋರಿಸುತ್ತಾನೆ. ಸ್ತ್ರೀಹತ್ಯೆ, ಹಿಮ್ಮೆಟ್ಟುವುದು, ಹಿಂದಿನಿಂದ ಹೊಡೆಯುವುದು, ಇವೇ ಮುಂತಾದ ರಾಮನ 'ಸುಗುಣ'ಗಳನ್ನು ಹಿಯ್ಯಾಳಿಸುತ್ತಾನೆ. ಯುದ್ಧ ಅನಿವಾರ್ಯವೆಂದು ಇಬ್ಬರೂ ಸಮರಭೂಮಿ ಯತ್ತ ಹೋಗುತ್ತಾರೆ.

**ಅಂಕ ೬**—ವಿದ್ಯಾಧರ ದಂಪತಿಗಳು ಅಂತರಿಕ್ಷದಲ್ಲಿ ಸೇರಿದು ಕುಮಾರವೀರರ ಯುದ್ಧವನ್ನು ನೋಡುತ್ತಾರೆ. ಆಗ್ನೇಯಾಸ್ತ್ರ, ವಾರುಣಾಸ್ತ್ರ, ಮುಂತಾಗಿ ದಿವ್ಯವಾದ ಅಸ್ತ್ರಪ್ರತ್ಯಸ್ತ್ರಗಳನ್ನು ಇಬ್ಬರೂ ಪ್ರಯೋಗಿಸುತ್ತಾ ವಿದ್ಯಾಧರ ರನ್ನೂ ಅಚ್ಚರಿಗೊಳಿಸುತ್ತಾರೆ. ಇಷ್ಟರಲ್ಲಿ ರಾಮನು ಅಲ್ಲಿ ಬಂದು ಅವರ ಕಲಹ ವನ್ನು ನಿಲ್ಲಿಸುತ್ತಾನೆ. ಈ ನಡುವೆ ಕುಶನೂ ಅಲ್ಲಿ ಬರಲು, ರಾಮನಿಗೆ ಲವಕುಶರ ವಿಷಯದಲ್ಲಿ ಮಮತೆ ಉಕ್ಕಿ ಹರಿಯುತ್ತದೆ. ಅವರೊಡನೆ ಮಾತ ನಾಡುತ್ತಾ ಆಡುತ್ತಾ ಅವರು ತನ್ನ ಪುತ್ರರೇ ಎಂಬ ಭಾವನೆ ರೂಢಮೂಲ ವಾಗುತ್ತದೆ. ಸೀತೆಯನ್ನು ಬಿಟ್ಟು ವನಪ್ರದೇಶವೇ ಅದು. ಇಬ್ಬರಲ್ಲೂ ರಾಮ ಸೀತೆಯರ ಲಕ್ಷಣಗಳು ಅಚ್ಚೊತ್ತಿದಂತಿವೆ. ಇಬ್ಬರಿಗೂ ಗುರೂಪದೇಶವಿಲ್ಲದೆ ಜೃಂಭಕಾಸ್ತ್ರಗಳು ಗೊತ್ತು. ನೋಡುವಾಗಲೇ ತನ್ನ ಹೃದಯವು ಆನಂದ ಸಾಗರದಲ್ಲಿ ಮುಳುಗಿತ್ತು. ಇಬ್ಬರ ವಯಸ್ಸೂ ಹನ್ನೆರಡೇ ವರ್ಷ—ಸೀತೆ ಯನ್ನು ಬಿಟ್ಟಷ್ಟೇ ಕಾಲ. ಸೀತೆಗೆ ಅವಳಿಮಕ್ಕಳಾಗುವ ಸೂಚನೆಗಳು ಮೊದಲೇ ತನ್ನ ಗಮನಕ್ಕೆ ಬಂದೂ ಇದ್ದುವು. ಈ ವಿಚಾರತರಂಗದಲ್ಲಿ ಲೀನನಾಗಿರುವ ರಾಮನ ಮುಂದೆ ಲವಕುಶರು ಸೀತಾರಾಮರ ಪವಿತ್ರ ಪ್ರೇಮವನ್ನು ವರ್ಣಿಸುವ ರಾಮಾಯಣಶ್ಲೋಕಗಳನ್ನು ಹಾಡುವರು. ಅವನ ಶೋಕ ಮತ್ತೂ ಹೆಚ್ಚುತ್ತದೆ. ಹುಡುಗರಿಗೆ ತಂದೆಯಾರೆಂಬ ಅರಿವು ಸ್ವಲ್ಪವೂ ಇಲ್ಲ. ಇತ್ತ ಯುದ್ಧವರ್ತಮಾನವನ್ನು ಕೇಳಿ ಜನಕ, ಕೌಸಲ್ಯೆಯರು ತಾವೇ ಅಲ್ಲಿಗೆ ಬರಲು ಹೊರಟರೆಂದೂ, ಕೃಶನಾದ ರಾಮನನ್ನು ಕಂಡೊಡನೆ ದಾರಿಯಲ್ಲೇ ಮೂರ್ಛೆಹೋದರೆಂದೂ ಸುದ್ದಿ ಬರುತ್ತದೆ. ಅವರನ್ನು ಕಂಡು ಸಂತೈಸಲು ರಾಮನು ಮುಂದಾಗುತ್ತಾನೆ.

**ಅಂಕ ೭**—ವಾಲ್ಮೀಕಿಗಳು ಬರೆದಿದ್ದ ನಾಟಕವನ್ನು ಆಡಿ ತೋರಿಸಲು ಗಂಗಾತೀರದಲ್ಲಿ ದೊಡ್ಡ ರಂಗಮಂಟಪ ಸಿದ್ಧವಾಗಿದೆ. ಅದನ್ನು ನೋಡಿ ಆನಂದಿಸಲು ಅಯೋಧ್ಯಾಪುರದ ಜನರು, ದೇವತೆಗಳು, ಅಸುರರು, ಮುಂತಾಗಿ

ಎಲ್ಲರಿಗೂ ಆಮಂತ್ರಣ ಹೋಗಿದೆ. ರಾಮ, ಲಕ್ಷ್ಮಣ, ಕುಶ, ಲವ, ಚಂದ್ರಕೇತು, ಮುಂತಾದವರೂ ಪ್ರೇಕ್ಷಕರಾಗಿ ಬಂದಿದ್ದಾರೆ. ನಾಟಕ ಆರಂಭವಾಗುವುದು ಪರಿತ್ಯಕ್ತೆಯಾದ ಸೀತೆಯ ದಾರುಣ ದುಃಖದಿಂದ. ನೋವನ್ನು ತಾಳಲಾರದೆ ಆಕೆ ಗಂಗೆಯಲ್ಲಿ ಬೀಳುತ್ತಾಳೆ; ಅಲ್ಲಿಯೇ ಅವಳಿ ಮಕ್ಕಳನ್ನು ಪ್ರಸವಿಸುತ್ತಾಳೆ. ಸೀತೆಯನ್ನು ಬೀಳದಂತೆ ಹಿಡಿದುಕೊಂಡು ಪೃಥ್ವಿ, ಗಂಗೆಯರು ಮಕ್ಕಳನ್ನೂ ಎತ್ತಿಕೊಂಡು ಬರುತ್ತಾರೆ. ಸೀತೆಯ ದುಃಖವು ಭೂಮಾತೆಯನ್ನೂ ಗೋಳಾಡಿಸುತ್ತದೆ. ಆದರೆ ಈಗಲೇ ಸೀತೆ ಯನ್ನು ತನ್ನಲ್ಲಿ ಅಡಗಿಸಿಕೊಳ್ಳಲು ಆಕೆ ಒಪ್ಪುವುದಿಲ್ಲ. ಮಕ್ಕಳ ಸಲುವಾಗಿ ಜೀವ ಹಿಡಿದಿರಬೇಕೆಂದು ಸೀತೆಯನ್ನು ಒಪ್ಪಿಸುತ್ತಾಳೆ. ತಮ್ಮಿಬ್ಬರಿಗಿಂತಲೂ ಸೀತೆ ಪಾವನೆಯೆಂದು ಪೃಥ್ವಿಗಂಗೆಯರು ಘೋಷಿಸುತ್ತಾರೆ. ರಾಮನು 'ಪುರಜನರು ಇದನ್ನು ಕೇಳಲಿ' ಎಂದುಕೊಳ್ಳುತ್ತಾನೆ. ಮಕ್ಕಳಿಗೆ ಜೃಂಭಕಾಸ್ತ್ರ ಬರುತ್ತದೆ. ಸ್ತನ್ಯತ್ಯಾಗಾನಂತರ ಮಕ್ಕಳನ್ನು ತಾನೇ ವಾಲ್ಮೀಕಿಗಳಿಗೆ ಒಪ್ಪಿಸಿಕೊಡುವು ದಾಗಿ ಗಂಗೆ ವಚನವೀಯುತ್ತಾಳೆ. ಭೂದೇವಿ ಸೀತೆಯನ್ನು ಪಾತಾಳಕ್ಕೆ ಒಯ್ಯುತ್ತಾಳೆ. ಇಲ್ಲಿಗೆ ಗರ್ಭನಾಟಕ ಮುಗಿಯುತ್ತದೆ. ರಾಮನು ಮೂರ್ಛೆ ಹೋಗುತ್ತಾನೆ.

ವಾಲ್ಮೀಕಿಗಳ ಪ್ರಭಾವದಿಂದ ಮತ್ತೊಂದು ಅದ್ಭುತ ಚಮತ್ಕಾರ ನಡೆಯು ತ್ತದೆ. ಗಂಗೆ, ಪೃಥ್ವಿ, ಸೀತೆಯರು ನಿಜವಾಗಿಯೂ ಗಂಗೆಯ ನೀರೊಳಗಿಂದ ಮೇಲೇಳುತ್ತಾರೆ. ಸೀತೆಯನ್ನು ಗಂಗೆ ಪೃಥ್ವಿಯರು ಅರುಂಧತಿಗೆ ಒಪ್ಪಿಸಿ ಕೊಡುತ್ತಾರೆ. ಅರುಂಧತಿ ಪ್ರಜೆಗಳ ಅಭಿಪ್ರಾಯವನ್ನು ನೇರವಾಗಿ ಕೇಳುತ್ತಾಳೆ. ಈಗ ಎಲ್ಲರೂ ಸೀತೆ ಪತಿವ್ರತೆಯೆಂದು ಒಮ್ಮತದಿಂದ ಹೇಳು ತ್ತಾರೆ. ಸೀತೆಯನ್ನು ಸಹಧರ್ಮಚಾರಿಣಿಯಾಗಿ ಮತ್ತೆ ಸ್ವೀಕರಿಸಬೇಕೆಂದು ರಾಮನಿಗೆ ಅರುಂಧತಿ ಹೇಳುತ್ತಾಳೆ. ಹೀಗೆ ರಾಮ-ಸೀತೆ, ಲವಕುಶರು, ಎಲ್ಲರ ಸಮಾಗಮಸಂತೋಷದ ಶುಭಾವಸರದಲ್ಲಿಯೇ ಲವಣನನ್ನು ಸಂಹರಿಸಿದ ಶತ್ರುಘ್ನನೂ ಬರುತ್ತಾನೆ. ಎಲ್ಲರೂ ಸುಖಿಗಳಾಗುತ್ತಾರೆ.

## ೩. ವಿಮರ್ಶೆ

**ನಾಟಕದ ಕಥಾಮೂಲ:**—ಆದಿಕವಿ ವಾಲ್ಮೀಕಿಗಳ ರಾಮಾಯಣದಲ್ಲಿ ಅಯೋಧ್ಯಾಕಾಂಡದಿಂದ ಯುದ್ಧಕಾಂಡದ ವರೆಗಿನ ಭಾಗ ಮಾತ್ರ ವಾಲ್ಮೀಕಿಕೃತವೆಂದೂ ಸೀತಾಪರಿತ್ಯಾಗಾದಿ ಅನೇಕ ಅಪ್ರಾಸಂಗಿಕವೃತ್ತಾಂತ ಗಳನ್ನೊಳಗೊಂಡ ಉತ್ತರಕಾಂಡವೂ, ಬಾಲಕಾಂಡದ ಅನೇಕ ಉಪಾಖ್ಯಾನ

ಗಳೂ ಉತ್ತರಕಾಲೀನ ಪ್ರಕ್ಷೇಪಗಳೆಂದೂ ಆಧುನಿಕ ವಿದ್ವಾಂಸರು ಸಪ್ರಮಾಣ ವಾಗಿ ನಿರ್ಣಯಿಸಿದ್ದಾರೆ. ಮೂಲಭಾಗಕ್ಕೂ ಪ್ರಕ್ಷೇಪಗಳಿಗೂ ಅರ್ಥ ದಲ್ಲಿ ಪರಸ್ಪರ ವಿಸಂಗತಿಗಳಿರುವಂತೆ ಶೈಲಿಯಲ್ಲಿಯೂ ಪ್ರಸ್ಫುಟಭೇದಗಳಿವೆ. ರಾಮನು ದೇವರ ಅವತಾರವೆಂಬ ಪೂಜ್ಯಕಲ್ಪನೆ, ಋಷಿಗಳ ಮಾಹಾತ್ಮ್ಯದ ಪ್ರಚಾರಬುದ್ಧಿ, ಅದ್ಭುತ ಘಟನೆಗಳ ಪ್ರೀತಿ, ಕಾಲ್ಪನಿಕ ಕಾರಣಸಮನ್ವಯದ ಪ್ರವೃತ್ತಿ, ಅಂತರಾರ್ಥ ಶೋಧನಾಸಕ್ತಿ ಮುಂತಾದ ಅನೇಕ ನಿಮಿತ್ತಗಳಿಂದ ಮೂಲಕಾಂಡಗಳಲ್ಲಿಯೂ ಎಷ್ಟೆಷ್ಟೋ ಪ್ರಕ್ಷೇಪಗಳು ಸೇರಿವೆ. ಆದರೆ ಈ ಪ್ರಕ್ಷೇಪಸಹಿತ ರಾಮಾಯಣವು ಈಗಿರುವಂತೆ ಕಾಳಿದಾಸನಿಗೇ ಪರಿಚಯ ವಿದ್ದ ಪ್ರಯುಕ್ತ ಭವಭೂತಿಗೂ ಪರಿಚಯವಿತ್ತೆನ್ನಲು ಸಂದೇಹವಿಲ್ಲ. ಅತ್ಯಂತ ಪ್ರಾಚೀನವಾದ ಆದಿರಾಮಾಯಣ, ಮಹಾಭಾರತದ ರಾಮೋಪಾ ಖ್ಯಾನ, ಹರಿವಂಶ, ವಾಯುಪುರಾಣ, ವಿಷ್ಣುಪುರಾಣ, ನೃಸಿಂಹಪುರಾಣಗಳಲ್ಲಿ ರಾಮನ ಕಥೆ ರಾಜ್ಯಾಭಿಷೇಕದಲ್ಲಿಯೇ ಮುಗಿಯುತ್ತದೆ. ಸೀತಾಪರಿತ್ಯಾಗದ ಪ್ರಸ್ತಾಪವೇ ಬರುವುದಿಲ್ಲ. ಭಾಸನ ರಾಮಾಯಣನಾಟಕಗಳಲ್ಲಿಯೂ ಈ ಪ್ರಸ್ತಾಪವಿಲ್ಲ. ಜೈನ ಗುಣಭದ್ರನ 'ಉತ್ತರಪುರಾಣ,' ಬೌದ್ಧ 'ಅನಾ ಮಕ ಜಾತಕ'ದಲ್ಲಿಯೂ ಈ ಸುದ್ದಿಯಿಲ್ಲ.

ರಾಮಾಯಣದ ಯುದ್ಧಕಾಂಡದ ಅಂತ್ಯದಲ್ಲಿಯೇ ಅಗ್ನಿಪರೀಕ್ಷೆಯ ವೃತ್ತಾಂತ ಬರುತ್ತದೆ. ಅದಕ್ಕೆ ಸ್ವಲ್ಪ ಮುಂಚೆ 'ಜನಾಪವಾದ ಭಯ'ದಿಂದ ರಾಮನ ಹೃದಯ ಹೋಳಾಯಿತು. ಎಂಬ ವರ್ಣನೆ ಬರುತ್ತದೆ. (ಪಶ್ಯತ ಸ್ತಾಂತು ರಾಮಸ್ಯ ಸಮೀಪೇ ಹೃದಯಪ್ರಿಯಾಂ| ಜನವಾದಭಯಾದ್ ರಾಜ್ಞೋ ಬಭೂವ ಹೃದಯಂ ದ್ವಿಧಾ || ಸರ್ಗ. ೧೧೫, ೧೧). ಅವಳನ್ನು ಸ್ವೀಕರಿಸುವುದು ಸಾಧ್ಯವಿಲ್ಲವೆಂದೂ ಸ್ಪಷ್ಟಾಕ್ಷರಗಳಿಂದ ಹೇಳಿಬಿಡುತ್ತಾನೆ. ತನ್ನ ಕುಲಗೌರವದ ಮಾತೂ ಅಲ್ಲಿ ಬರುತ್ತದೆ—

ಪ್ರಾಪ್ತಚಾರಿತ್ರಸಂದೇಹಾ ಮಮ ಪ್ರತಿಮುಖೇ ಸ್ಥಿತಾ |<br>
ಕಃ ಪುಮಾಂಸ್ತು ಕುಲೇ ಜಾತಃ ಸ್ತ್ರಿಯಂ ಪರಗೃಹೋಷಿತಾಮ್<br>
ತೇಜಸ್ವೀ ಪುನರಾದದ್ಯಾತ್ ಸುಹೃಲ್ಲೋಭೇನ ಚೇತಸಾ ||<br>
ರಾವಣಾಂಕಪರಿಕ್ಲಿಷ್ಟಾಂ ದೃಷ್ಟಾಂ ದುಷ್ಟೇನ ಚಕ್ಷುಷಾ |<br>
ಕಥಂ ತ್ವಾಂ ಪುನರಾದದ್ಯಾಂ ಕುಲಂ ವ್ಯಪದಿಶನ್ಮಹತ್ ||

(ಶ್ಲೋಕ ೧೭, ೧೯)

ಕ್ಷತ್ರಿಯವೀರನಾದ ರಾಮನಿಗೆ ಪರೀಕ್ಷೆಯಿಲ್ಲದೆ ಪತ್ನಿಯನ್ನು ಸ್ವೀಕರಿಸಲು ಆತುರವಿಲ್ಲ. 'ದಿವ್ಯ'ಗಳಲ್ಲಿ (Ordeals) ನಂಬಿಕೆಯಿದ್ದ ಕಾಲ ಅದು. ರಾವಣನ

ಕೈಸೆರೆಯಲ್ಲಿದ್ದ ಹೆಣ್ಣಿನ ಪಾತಿವ್ರತ್ಯದ ವಿಷಯವನ್ನು ನಂಬುವುದು ರಾಮನಿಗೂ ಕಷ್ಟವಾದರೆ ಅದು ಅವಮಾನುಷವೆನಿಸುವುದಿಲ್ಲ. ಸೀತೆಯೂ ಸಂತೋಷದಿಂದಲೇ ದಿವ್ಯಪರೀಕ್ಷೆಗೆ ಒಪ್ಪಿದಳು. ತನ್ನ ಅಚಲಪಾತಿವ್ರತ್ಯವನ್ನು ಲೋಕಕ್ಕೆಲ್ಲ ತೋರಿಸಿ ದೇವಿಯೆನಿಸಿದಳು. ಪತಿಯನ್ನು ಸೇರಿದಳು.

ಉತ್ತರಕಾಂಡದ ಕಥೆ ಮಾತ್ರ ಸಂಗಲಾರದ ತುತ್ತಾಗುತ್ತದೆ. ಅಗ್ನಿಯೇ ಮುಂತಾದ ದೇವತೆಗಳಿಂದಲೂ, ದಶರಥ ಮುಂತಾದ ಪಿತೃಗಳಿಂದಲೂ, ಏಕ ಕಂಠದಿಂದ ಪತಿವ್ರತೆಯೆಂಬ ಪದವಿಯನ್ನು ಪಡೆದ ಸೀತೆ ಅಯೋಧ್ಯೆಗೆ ಹಿಂದಿರುಗಿದ ಮೇಲೆ ರಾಮನಿಗೆ ಮತ್ತೆ ಶಿಕ್ಷಾರ್ಹಳೆನಿಸುವುದು ಅಸಂಭವ ವಾಗಬೇಕಾಗಿತ್ತು. ಆದರೆ ಒಮ್ಮೆ ಸರಸಗೋಷ್ಠಿಯಲ್ಲಿರುವಾಗ ಭದ್ರನೆಂಬವನು ಜನಗಳ ಮಾತನ್ನು ರಾಮನಿಗೆ ತಿಳಿಸುತ್ತಾನೆ—'ನಾವೂ ಸಂದಿಗ್ಧಶೀಲೆಯರನ್ನೆಲ್ಲ ಮರುಮಾತನಾಡದೆ ಸಹಿಸಿಕೊಳ್ಳುವಂತಾಗಿದೆ. ರಾಜನಂತೆಯೇ ಪ್ರಜೆಗಳಿರ ಬೇಡವೆ?'

> ಅಸ್ಮಾಕಮಪಿ ದಾರೇಷು ಸಹನೀಯಂ ಭವಿಷ್ಯತಿ |
> ಯಥಾ ಹಿ ಕುರುತೇ ರಾಜಾ ಪ್ರಜಾಸ್ತಮನುವರ್ತತೇ ||
>
> (ಸರ್ಗ ೪೩, ಶ್ಲೋ. ೧೯)

ಇದನ್ನು ಕೇಳಿದವನೇ ರಾಮನು ಪೂರ್ವಾಪರ ವಿವೇಚನೆಗೂ ಹೋಗದೆ ಸೀತೆಯನ್ನು ಗಂಗೆಯಿಂದಾಚೆ ತೊರೆದುಬರುವಂತೆ ಲಕ್ಷ್ಮಣನಿಗೆ ಅಪ್ಪಣೆ ಮಾಡುತ್ತಾನೆ. ಅಂತೆಯೇ ಅವನು ಸೀತೆಯನ್ನು ಕೊಂಡೊಯ್ದು ವಾಲ್ಮೀಕಿಗಳ ಆಶ್ರಮದ ಹತ್ತಿರ ಬಿಟ್ಟು ಬರುತ್ತಾನೆ. ದೈವವಶಾತ್ ಸೀತೆಗೆ ವಾಲ್ಮೀಕಿಗಳ ದರ್ಶನವಾಗಿ ಅವರ ರಕ್ಷಣೆ ದೊರೆಯುತ್ತದೆ. ಅವರ ಆಶ್ರಮದಲ್ಲಿಯೇ ಕುಶಲವರ ಜನ್ಮವಾಗುತ್ತದೆ. ಅವರ ವಿದ್ಯಾಭ್ಯಾಸವೂ ನಡೆಯುತ್ತದೆ.

ಇತ್ತ ರಾಮನಿಗೂ ಅಯೋಧ್ಯೆಯಲ್ಲಿ ನೆಮ್ಮದಿಯಿಲ್ಲ. ಕರ್ತವ್ಯವೆಂದು ರಾಜಧರ್ಮಗಳನ್ನು ನೆರವೇರಿಸಿದರೂ ಸೀತೆಗೆ ಅನ್ಯಾಯಮಾಡಿದೆನೆಂಬ ಅನುಶಯವಿದ್ದೇ ಇದೆ. ಕಡೆಗೊಮ್ಮೆ ಅಶ್ವಮೇಧಯಾಗಮಾಡಲು ನಿಶ್ಚಯಿಸು ತ್ತಾನೆ. ಯಜ್ಞಮಂಟಪಕ್ಕೆ ಆಹ್ವಾನಿತರಾಗಿದ್ದ ವಾಲ್ಮೀಕಿಗಳು ರಾಮಾಯಣದ ಪಾಠವಾಗಿದ್ದ ಕುಶಲವರನ್ನು ಕರೆತರುತ್ತಾರೆ. ಯಜ್ಞಸಭೆಯಲ್ಲಿ ರಾಮಾದಿ ಗಳೆಲ್ಲರ ಮುಂದೆ ರಾಮಾಯಣವನ್ನು ಅವರು ಹಾಡುತ್ತಾರೆ. ಅವರ ಜನ್ಮ ವೃತ್ತಾಂತವನ್ನು ತಿಳಿದ ರಾಮನು ಸೀತೆ ಜೀವಿಸಿರುವುದನ್ನು ಅರಿತು ಆಕೆ ಯನ್ನು ಕರೆಯಿಸುತ್ತಾನೆ. ಪಾತಿವ್ರತ್ಯದ ಸಮರ್ಥನೆಗೆ ಮತ್ತೆ ಪ್ರಮಾಣ ಗಳನ್ನು ಕೊಡಬೇಕೆಂದು ಆಕೆಯನ್ನು ಕೇಳಲು, ಸೀತೆ ಬೇಸತ್ತು 'ನಾನು

ನಿನ್ನೊಬ್ಬನಲ್ಲೇ ಅಚಲಶ್ರದ್ಧೆಯುಳ್ಳವಳಾಗಿದ್ದರೆ ಭೂದೇವಿ ಬಾಯ್ಬಿಟ್ಟು ನನ್ನನ್ನು ಅಡಗಿಸಿಕೊಳ್ಳಲಿ' ಎಂದು ಶಪಥಮಾಡುತ್ತಾಳೆ. ಅಂತೆಯೇ ಭೂಮಿ ಬಿರಿಯುತ್ತದೆ. ಪೃಥ್ವಿ ಸೀತೆಯನ್ನು ಕೈನೀಡಿ ಕರೆದುಕೊಂಡು ಹೋಗುತ್ತಾಳೆ. ರಾಮನ ಪಾಲಿಗೆ ಸೀತೆಯ ಕಥೆ ಮುಗಿಯುತ್ತದೆ.

ಭವಭೂತಿಯ ಉತ್ತರರಾಮಚರಿತೆಗೆ ಇದೇ ಮುಖ್ಯವಾದ ಕಥಾಮೂಲ. ಕಾಳಿದಾಸನ ರಘುವಂಶದಲ್ಲಿಯೂ ಇದೇ ಕಥಾಭಾಗ ಬರುತ್ತದೆ. ಕಾಳಿದಾಸನು 'ಭದ್ರ'ನನ್ನು ಮಿತ್ರನೆನ್ನುವ ಬದಲು ಗುಪ್ತಚಾರನೆಂದಿದ್ದಾನೆ. ಭವಭೂತಿ 'ಭದ್ರ'ನ ಹೆಸರನ್ನು ಅನ್ವರ್ಥಕವಾಗುವಂತೆ 'ದುರ್ಮುಖ'ನೆಂದು ಬದಲಾಯಿಸಿದ್ದಾನೆ.

ಭವಭೂತಿಗೆ ಬೇರೆ ರಾಮಾಯಣ ಕಥೆಗಳು ಗೊತ್ತಿರಲಿಲ್ಲವೆಂದು ಹೇಳುವಂತಿಲ್ಲ. ಏಕೆಂದರೆ ಕಥಾಸರಿತ್ಸಾಗರ, ಭಾಗವತಪುರಾಣ, ಜೈಮಿನೀಯ ಅಶ್ವಮೇಧ, ಪದ್ಮಪುರಾಣ, ಆನಂದರಾಮಾಯಣ, ಮುಂತಾದ ಉತ್ತರ ಕಾಲೀನ ಗ್ರಂಥಗಳಲ್ಲೆಲ್ಲ ಜನಾಪವಾದವೆಂಬ ಪ್ರಬಲಕಾರಣದ ಬದಲು ಅಗಸನ ಟೀಕೆಯೆಂಬ ಕ್ಷುದ್ರತರ ಕಾರಣ ವರ್ಣಿತವಾಗಿದೆ. ಇವುಗಳಲ್ಲಿ ಕಥಾಸರಿತ್ಸಾಗರದ ಮೂಲವಾದ ಬೃಹತ್ಕಥೆಯ ಕಥಾಭಾಗವೊಂದಾದರೂ ಭವಭೂತಿಗೆ ಪರಿಚಿತವಾಗಿದ್ದಿರಬಹುದು. ಉಳಿದ ಗ್ರಂಥಗಳೆಲ್ಲವನ್ನೂ ಭವಭೂತಿಗಿಂತ ಅರ್ವಾಚೀನವೆಂದು ತಿಳಿಯುವ ಪ್ರಥೆಯೇ ಇಂದಿನ ಸಂಶೋಧಕರಲ್ಲಿದೆ. ಆದರೆ ಅವುಗಳಿಗೆ ಆಧಾರಭೂತವಾದ ಕಥಾಸಾಮಗ್ರಿಗಳು ಭವಭೂತಿಯ ಕಾಲದಲ್ಲಿಯೂ ಇದ್ದುವೆಂದು ಊಹಿಸಲು ಆಸ್ಪದವಿಲ್ಲದೆ ಇಲ್ಲ. ಪದ್ಮಪುರಾಣದ ಪಾತಾಳಖಂಡದಲ್ಲಿ ಯಜ್ಞಾಶ್ವದ ಸಂಚಾರದ ವಿಸ್ತೃತ ವರ್ಣನೆಯಿದೆ. ಮೊದಲು ಲವನು ಸೈನ್ಯದೊಡನೆ ಯುದ್ಧಮಾಡಿ ಗೆದ್ದರೂ ಕಡೆಗೆ ಸೆರೆ ಸಿಕ್ಕುತ್ತಾನೆ. ಅನಂತರ ಕುಶನು ಬಂದು ಬಿಡಿಸಿ ಶತ್ರುವೀರರನ್ನೆಲ್ಲ ಸೆರೆಗೈಯುತ್ತಾನೆ. ಸೀತೆ ಬಂದು ಅವರನ್ನು ಬಂಧನದಿಂದ ಬಿಡಿಸುತ್ತಾಳೆ. ಇದೆಲ್ಲವನ್ನೂ ಕೇಳಿ ತಿಳಿದ ರಾಮನು ಅವರೆಲ್ಲರನ್ನೂ ಕರೆಸಿಕೊಳ್ಳುತ್ತಾನೆ. ಯಜ್ಞಕ್ಕಾಗಿ ಬಂದಿರುವ ವಾಲ್ಮೀಕಿಗಳ ಮಾತಿಗೆ ಬೆಲೆಕೊಟ್ಟು ಸೀತೆಯನ್ನು ಮತ್ತೆ ಸ್ವೀಕರಿಸುತ್ತಾನೆ. ಪುನಃ ದಿವ್ಯಪರೀಕ್ಷೆಯ ಅಗತ್ಯವಿಲ್ಲಿ ಬರುವುದಿಲ್ಲ. ಪುರಾಣದಲ್ಲಿ ಲವಕುಶರ ವಯಸ್ಸು ಹದಿನಾರೆಂದು ಹೇಳಿದೆ.

ಭವಭೂತಿಯ ಕಾಲದಲ್ಲಿ ಮೊದಲನೆಯ ದುಃಖಾಂತ ಕಥೆಯ ಜತೆಗೆ ಈ ಎರಡನೆಯ ಸುಖಾಂತ ಕಥಾಭಾಗವೂ ಒಂದಿಲ್ಲೊಂದು ರೀತಿಯಲ್ಲಿ ಪ್ರಚಾರದಲ್ಲಿದ್ದಿರಬೇಕೆಂಬುದು ತೋರುತ್ತದೆ. ಆದರೆ ಯಾವುದೊಂದನ್ನೂ

ಯಥಾವತ್ತಾಗಿ ನಿರೂಪಿಸಲು ಹೊರಡದೆ ಎರಡರಲ್ಲೂ ನಾಟಕೋಚಿತವಾದ ಗೂಡನ್ನು ಮಾತ್ರ ತೆಗೆದುಕೊಂಡು ತನ್ನ ಕಲ್ಪನೆಯಿಂದ ಮಾಂಸರಕ್ತಗಳನ್ನು ತುಂಬಿಸಿದ ಪ್ರತಿಷ್ಠೆ ಭವಭೂತಿಯದೇ ಸರಿ.

**ಕಥೆಯಲ್ಲಿ ಭವಭೂತಿ ಮಾಡಿಕೊಂಡಿರುವ ಮಾರ್ಪಾಡುಗಳು**

೧. ಚಿತ್ರದರ್ಶನ ವೃತ್ತಾಂತ.

೨. ಸೀತೆಗೆ ಗಂಗಾತೀರದ ವನರಾಜಿಗಳಲ್ಲಿ ವಿಹರಿಸುವ ಬಯಕೆ.

೩. ಆಗ ತಾನೆ ಗುರುಹಿರಿಯರೆಲ್ಲರೂ ಹೋಗಿರುವ, ಹನ್ನೆರಡು ವರ್ಷ ಬರಲಾರದಂತೆ ಹೋಗಿರುವ, ಋಷ್ಯಶೃಂಗನ ಯಜ್ಞ. ಋಷ್ಯಶೃಂಗ ಈ ನಾಟಕದಲ್ಲಿ ರಾಮನ ಭಾವ.

೪. ವಸಿಷ್ಠರ ಸಂದೇಶ.

೫. ಜೃಂಭಕಾಸ್ತ್ರಗಳ ವಿಷಯ.

೬. ಪರಿತ್ಯಕ್ತೆಯಾದ ಸೀತೆ ರಾಮಾಯಣದಲ್ಲಿ ರಾಮನಿಗೆ ಬಿರುಸಾಗಿ ಮಾರುತ್ತರವನ್ನು ಕಳುಹಿಸುತ್ತಾಳೆ. ಇಲ್ಲಿ ಅದರ ಸುದ್ದಿಯಿಲ್ಲ.

೭. ವಾಲ್ಮೀಕಿಗಳು ಇಲ್ಲಿ ಸೀತೆಯನ್ನು ರಕ್ಷಿಸುವುದಿಲ್ಲ. ಸೀತೆ ಆತ್ಮಹತ್ಯೆಗೆಂದು ಗಂಗೆಯಲ್ಲಿ ಬಿದ್ದಾಗ ಗಂಗೆಯೂ ಪೃಥ್ವಿಯೂ ಅವಳನ್ನು ಕಾಪಾಡುತ್ತಾರೆ.

೮. ಗಂಗೆ, ಪೃಥ್ವಿ, ವಾಸಂತಿ, ತಮಸೆ, ಅರುಂಧತಿ, ಯಾರೂ ಮೂಲಕಥೆಯಲ್ಲಿ ಭಾಗವಹಿಸುವುದಿಲ್ಲ. ಇಲ್ಲಿ ಅವರ ಕಾರ್ಯ ಹೆಚ್ಚಿನದು. ಛಾಯಾ ಸೀತೆ ಮೂಲದಲ್ಲಿಲ್ಲ.

೯. ಮೂಲದಲ್ಲಿ ಎಲ್ಲಿಯೋ ಪ್ರಸಂಗಾಂತರದಲ್ಲಿ ಬರುವ ಶಂಬೂಕವಧೆ ನಾಟಕದಲ್ಲಿ ರಾಮನನ್ನು ಪಂಚವಟಿಗೆ ತರುವ ನಿಮಿತ್ತವಾಗುತ್ತದೆ ; ಸೀತಾಸಮಾಗಮಕ್ಕೆ ನಾಂದಿಯಾಗುತ್ತದೆ.

೧೦. ವಾಲ್ಮೀಕಿಗಳ ಆಶ್ರಮದಲ್ಲಿ ಜನಕಾದಿಗಳಾರೂ ಸೇರುವ ವಿಷಯ ಮೂಲದಲ್ಲಿಲ್ಲ. ನಾಟಕದಲ್ಲಿ ಅದೇ ಎಲ್ಲಕ್ಕಿಂತಲೂ ಮುಖ್ಯವಾದ ಕೇಂದ್ರವಾಗುತ್ತದೆ. ಎಲ್ಲರ ಸಮಾಗಮಕ್ಕೂ ನೆಲೆಯಾಗುತ್ತದೆ.

೧೧. ಲವಕುಶರ ಯುದ್ಧವ್ಯಾಪಾರವನ್ನು ವಿಸ್ತರಿಸಿ ಸೀತೆ ಬರುವಂತೆ ಮಾಡುವ ಬದಲು, ಭವಭೂತಿ ಅದನ್ನು ಸಂಗ್ರಹಿಸಿ ರಾಮನೇ ಕಾರಣಾಂತರದಿಂದ ಬರುವಂತೆ ಮಾಡುತ್ತಾನೆ. ಲಕ್ಷ್ಮಣನ ಮಗನಾದ ಚಂದ್ರಕೇತುವೂ ಕವಿಸೃಷ್ಟಿಯೇ.

೧೨. ಮಕ್ಕಳ ಪ್ರತ್ಯಭಿಜ್ಞಾನದ ದೃಶ್ಯ.

೧೩. ಪ್ರಜೆಗಳ ಮನಸ್ಸನ್ನು ತಿದ್ದುವ ಗರ್ಭನಾಟಕ; ವಾಲ್ಮೀಕಿಗಳ ಕಾರ್ಯ.

೧೪. ವಾಲ್ಮೀಕಿಗಳ ದಿವ್ಯಪ್ರಭಾವದಿಂದ ಪೃಥ್ವಿ, ಗಂಗೆಯರೇ ಸೀತೆಯೊಡನೆ ಬರುವ ಸನ್ನಿವೇಶ.

ಇವುಗಳು ಭವಭೂತಿಯು ಕಲ್ಪಿತ ವೃತ್ತಾಂತಗಳಲ್ಲಿ ಮುಖ್ಯವಾದುವು.

**ಮಾರ್ಪಾಡುಗಳ ಔಚಿತ್ಯ**:—ರಾಮಾಯಣದ ಐದುಕಾಂಡಗಳುದ್ದಕ್ಕೂ ಸೀತಾರಾಮರ ಪರಿಶುದ್ಧ ಹಾಗು ಪವಿತ್ರಪ್ರೇಮವನ್ನು ಬಾಯಾರೆ ಬಣ್ಣಿಸಿದ ವಾಲ್ಮೀಕಿ ಉತ್ತರಕಾಂಡದಲ್ಲಿ ಸೀತಾಪರಿತ್ಯಾಗದೊಡನೆ ಗ್ರಂಥವನ್ನು ಮುಗಿಸುವುದಾಗಲಿ, ಅಥವಾ ಸೀತೆಯನ್ನು ಭೂಮಿಯೇ ನುಂಗುವಂತೆ ಮಾಡುವುದಾಗಲಿ ಕಾವ್ಯನ್ಯಾಯಕ್ಕೆ (Poetic Justice) ಸಲ್ಲದು. ಒಂದು ವೇಳೆ ವಿಸ್ತಾರವಾದ ಮಹಾಕಾವ್ಯದ ಬೃಹನ್ನದಿಗೆ ಅದು ಸೂಕ್ತ ಸಮಾಪ್ತಿಯಾದರೂ, ನಾಟಕದ ಮುಖ್ಯ ಸೂತ್ರವಾದ ಕಾರ್ಯಕಾರಣ ಭಾವಕ್ಕೆ ಅದು ಅಡ್ಡಿಯಾಗುವುದು. ಏಕೆಂದರೆ ಸೀತೆ ನಿಜವಾಗಿಯೂ ಪತಿವ್ರತೆ, ಸಾಧ್ವೀಮಣಿ, ಎಂಬುದು ಶ್ರೀರಾಮನಿಗೆ ಅಗ್ನಿಪರೀಕ್ಷೆಯಾದ ಮೇಲಾದರೂ ನಿಸ್ಸಂದಿಗ್ಧವಾಗಿ ತಿಳಿದಾದ ಮೇಲೆ, ಆಕೆಯನ್ನು ನಿಷ್ಕಾರಣವಾಗಿ ಅಡವಿಗಟ್ಟಿದರೆ ಆಕೆಯ ಬಗೆಗೆ ಆದರ್ಶರಾಜನು ಅಪಚಾರವೆಸಗಿದಂತಾಗುವುದಿಲ್ಲವೆ? ಒಬ್ಬ ಸಾಮಾನ್ಯ ಪ್ರಜೆಯ ಅಕಾಲಮರಣದ ಜವಾಬ್ದಾರಿಯನ್ನು ತಾನೇ ಹೊತ್ತುಕೊಳ್ಳುವಂತಹ ಆದರ್ಶರಾಜನು ಅಂತಹ ಪಾವನಶೀಲೆಯಾದ ಕೈಹಿಡಿದ ಹೆಂಡತಿಗೆ ಅನ್ಯಾಯಮಾಡುವುದನ್ನು ಸರಿಯೆಂದು ಸಮರ್ಥಿಸಲಾದೀತೆ? ತನ್ನ ಕುಟುಂಬವನ್ನೇ ಯೋಗ್ಯವಾಗಿ ರಕ್ಷಿಸಲಾರದವನು ಲೋಕವನ್ನು ಸಂರಕ್ಷಿಸಿಯಾನೆ? ಇರಲಿ. ರಾಮನ ಬುದ್ಧಿಗೆ ಮಂಕು ಕವಿಯಿತೆಂದರೂ ತ್ರಿಕಾಲಜ್ಞಾನಿಗಳೂ, ಚಿರವೃದ್ಧರೂ, ಕುಲಪುರೋಹಿತರೂ ಆದ ವಸಿಷ್ಠರಿಗೂ ಮಂಕು ಕವಿಯಿತೆನ್ನಬೇಕೆ? ಅವರೇಕೆ ರಾಮನಿಗೆ ಬುದ್ಧಿ ಹೇಳಲಿಲ್ಲ? ಮಹಾತಾಯಿಯಾದ ಭೂದೇವಿಯಾದರೂ ಮಗಳ ಅಪಮಾನವನ್ನು ಸುಮ್ಮನೆ ಶಕ್ತಿಹೀನಳಂತೆ ಸಹಿಸಿದ್ದೇಕೆ? ಅರುಂಧತಿಯೇನು ನಿದ್ರಿಸುತ್ತಿದ್ದಳೆ? ಈ ಮಾತನ್ನು ಕೇಳಿಯೂ ರಾಮನಿಗೆ ಬುದ್ಧಿ ಹೇಳುವಷ್ಟು ವಿವೇಕವಾಗಲಿ, ಅವನನ್ನು ದಂಡಿಸುವ ಕೋಪಜ್ವಾಲೆಯಾಗಲಿ ಸೀತೆಯ ತಂದೆಯಾದ ಜನಕನಿಗೆ ಬಾರದೆ ಹೋದುದೆಂತು? ಅಂತಹ ಸೀತಾರಾಮರ ಮಕ್ಕಳಾದರೂ ತಾಯಿಯ ಅಪಮಾನವನ್ನು ತೊಡೆಯಲು ಯತ್ನಿಸಬೇಡವೆ? ಅಂತಹ ಸೀತೆಗೆ

ಇಂತಹ ಗತಿಯೆ? ಇತ್ಯಾದಿ ನೂರೆಂಟು ಸಂದೇಹ ಸಂದೋಹಗಳು ಸಂದೇಹವಾಗಿಯೇ ಉಳಿದರೆ ಮಹಾಕಾವ್ಯವಾಗಬಹುದಾದರೂ ನಾಟಕವಾಗುವುದಿಲ್ಲ. ಮಹಾಕಾವ್ಯದಲ್ಲಿ ನಿರೂಪಣೆಗೆ ಮಹತ್ವವಾದರೆ ನಾಟಕದಲ್ಲಿ ಕಾರ್ಯಕಾರಣಬದ್ಧವಾದ ಸಂಗತಿಗಳಿಗೆ ಮಾತ್ರ ಪುರಸ್ಕಾರ. ಅಷ್ಟೇ ಅಲ್ಲ; ಪಾತ್ರಗಳ ಔಚಿತ್ಯವೂ ನಾಟಕದಲ್ಲಿ ಬಹು ಮುಖ್ಯ. ರಾಮನು ಒಮ್ಮೆ ಶುದ್ಧಪ್ರೇಮಮೂರ್ತಿಯಾಗಿ ಇನ್ನೊಮ್ಮೆ ಪ್ರೇಮಶೂನ್ಯನಾಗಿ ಬಿಡುವುದು ನಾಟಕಕ್ಕೆ ಸಲ್ಲದು. ಹೀಗೆ ರಾಮಸೀತೆಯರ, ಜನಕ ವಸಿಷ್ಠಾದಿಗಳ, ಪಾತ್ರಗಳೆಲ್ಲಕ್ಕೂ ಉಜ್ಜ್ವಲತಮ ಪ್ರಕರ್ಷವನ್ನು ಸಾಧಿಸಿ, ಕಥಾಭಾಗದ ಅನನ್ವಿತಾಂಶಗಳೆಲ್ಲವೂ ಅಳಿಸಿಹೋಗುವಂತೆ ಮಾಡಿ, ಸೀತಾರಾಮರ ಪುನಸ್ಸಮಾಗಮವನ್ನು ನಾಟಕೋಚಿತವಾಗಿ ನಿರ್ವಹಿಸಬೇಕೆಂಬುದೇ ಭವಭೂತಿಯ ಗುರಿ. ಈ ಗುರಿಯನ್ನು ಮುಟ್ಟುವುದರಲ್ಲಿ ಭವಭೂತಿ ಪಡೆದಿರುವ ಯಶಸ್ಸು ಅದ್ವಿತೀಯವಾದುದು; ಅವನು ಕಥೆಯ ಬೇರೆ ಬೇರೆ ಪಾಠಗಳನೆಲ್ಲ ಕೂಡಿಸಿಕೊಂಡು ನೆಯ್ದಿರುವ ಜಾಣ್ಮೆ ಅದ್ಭುತವಾದುದು; ಮಾಡಿಕೊಂಡಿರುವ ಮಾರ್ಪಾಡುಗಳ ಮಹತ್ತ್ವ ಮತ್ತೆ ಮತ್ತೆ ಓದಿದಷ್ಟೂ ಮಹೋನ್ನತವಾಗಿ ಕಾಣುವಂತಹುದು. ಪದ್ಮಪುರಾಣದಲ್ಲಿ ಕಥೆ ಸುಖಾಂತವಾದರೂ ಮೊದಲು ಸೀತಾರಾಮರ ಸಹಜೀವನಕ್ಕೆ ಅಡ್ಡಬಂದ ಪ್ರಜೆಗಳು ಕಡೆಗೆ ತೆಪ್ಪನಿದ್ದುದೇಕೆಂಬ ಪ್ರಶ್ನೆ ಉಳಿದೇ ಇರುತ್ತದೆ. ತನ್ನ ಪ್ರತಿಭಾದರ್ಶನವನ್ನು ವಾಲ್ಮೀಕಿಗಳಿಗೇ ಅರ್ಪಿಸಿ 'ವಾಲ್ಮೀಕಿಗಳೇ ಸೀತೆಯ ಉತ್ತರಕಥೆಯನ್ನು ನಾಟಕರೂಪವಾಗಿ ದುಃಖಾಂತವಾಗಿ ಬರೆದರು. ಹಾಗೆ ದುಃಖಾಂತವಾಗಿ ಬರೆಯಲು ಅವರಿಗೊಂದು ಪ್ರಬಲ ಪ್ರಯೋಜನವಿತ್ತು. ಯಾವ ಪ್ರಜೆಗಳು ಸೀತಾರಾಮರ ಸಮಾಗಮಕ್ಕೆ ಅಡ್ಡವಾಗಿದ್ದರೋ ಆ ಪ್ರಜೆಗಳ ಮುಂದೆಯೇ ಆ ಘೋರವನ್ನು ಅಭಿನಯಿಸಿ ತೋರಿಸಿ ತನ್ಮೂಲಕ ಅವರ ಮನಃಪರಿವರ್ತನವನ್ನು ಉಂಟಾಗಿಸಿ, ಸೀತಾರಾಮರ ಮಿಲನವನ್ನು ಸಾಧಿಸಬೇಕೆಂಬುದೇ ಅವರ ಹೆಗ್ಗುರಿ. ಲಂಕೆಯಲ್ಲಿ ಅಗ್ನಿ ಸಾಕ್ಷ್ಯಕೊಟ್ಟಿದ್ದಂತೆ, ಮತ್ತೊಮ್ಮೆ ತಾವಾಗಿಯೇ ಬಂದು ಗಂಗೆ ಪೃಥ್ವಿಯರು ಸಾಕ್ಷಾತ್ತಾಗಿ ಸೀತೆಯ ಪುಣ್ಯಶೀಲದ ಬಗೆಗೆ ಸಾಕ್ಷ್ಯಕೊಟ್ಟರೆ ಪ್ರಜೆಗಳು ನಂಬಿಯೇ ನಂಬುವರೆಂದು ವಾಲ್ಮೀಕಿಗಳ ಆಶಯ. ಸಾಕ್ಷ್ಯ ಬೇಕಾದುದು ರಾಮನ ಸಲುವಾಗಿ ಅಲ್ಲ; ಲಂಕೆಯಲ್ಲಿ ಆದುದನ್ನು ಕಾಣದ ಪ್ರಜೆಗಳ ಸಲುವಾಗಿ'—ಎಂಬುದಾಗಿ ತನ್ನ ಅಂತ ರ್ನಾಟಕದ ವೈಶಿಷ್ಟ್ಯವನ್ನು ಭವಭೂತಿಯೇ ತಿಳಿಸಿ ಹೇಳಿದ್ದಾನೆ.

ಹೀಗೆ ನಾಟಕದ ಮುಖ್ಯ ಲಕ್ಷ್ಯ—ರಾಮನ ಪತ್ನೀಪರಿತ್ಯಾಗಕ್ಕೆ

ಉಪಪತ್ತಿಯನ್ನು ಹೇಳಿ ಸೀತಾರಾಮರ ಪುನರ್ಮಿಲನಕ್ಕೆ ಸನ್ನಿವೇಶವನ್ನು ರಚಿಸುವುದು. ನಾಟಕದ ಕಡೆಗೆ ಬರುವ ಈ ಪುನರ್ಮಿಲನಕ್ಕೆ ಒಂದೊಂದು ಅಂಕದಲ್ಲೂ ಸೂಚನೆಗಳಿವೆ; ಕಾರಣಕಲ್ಪನೆಯೂ ಇದೆ. ಪ್ರಥಮಾಂಕದಲ್ಲಿ ಸೀತಾರಾಮರ ಸ್ವರ್ಗೀಯ ಪ್ರೇಮಚಿತ್ರದ ಜತೆಗೆ ಸೀತಾಪರಿತ್ಯಾಗ ವೃತ್ತಾಂತವೂ ಬಂದರೆ, ಎರಡು ಮೂರನೆಯ ಅಂಕಗಳಲ್ಲೇ ಸೀತಾರಾಮರ ಮಾನಸಿಕ ವಿಕಲ್ಪಗಳು ಪರಿಹಾರವಾಗುತ್ತಬಂದು ಪುನರ್ಮಿಲನದ ಅಸಾಧ್ಯತೆ ದೂರವಾಗುತ್ತದೆ. ೪, ೫, ೬, ನೆಯ ಅಂಕಗಳಲ್ಲೆಲ್ಲ ಪುನರ್ಮಿಲನಕ್ಕೆ ಸಾಧಕ ಗಳಾದ ಘಟನೆಗಳ ಉಲ್ಲೇಖವಿದೆ. ಕಡೆಗೆ ಪುನರ್ಮಿಲನ ಸಹಜವೆನಿಸುವಂತೆ ಸಂಪನ್ನವಾಗುತ್ತದೆ. ಕವಿ ಈ ಒಂದೊಂದು ಅಂಶವನ್ನೂ ಹೇಗೆ ಕಲಾಪೂರ್ಣ ವಾಗಿ ಯೋಜಿಸಿರುವನೆಂಬುದನ್ನು ಗಮನಿಸೋಣ.

ನಾಟಕದ ನಾಂದಿಯಿಂದ ಹಿಡಿದು ಇಡಿಯ ಪ್ರಸ್ತಾವನೆ ಕೂಡ ಮಹಾರ್ಥ ಗರ್ಭಿತವಾಗಿದೆ. ನಾಂದಿಯಲ್ಲಿ ಪೂರ್ವ ಕವಿಸ್ಮರಣೆ ಮಾಡುವಾಗಲೇ 'ಆತ್ಮನ ಕಲಾಸುಂದರಿ ಅಮೃತೆ'ಯೆನ್ನುವಾಗ ಪರಮಾತ್ಮನಾದ ಶ್ರೀರಾಮನ ಕಲಾ ರೂಪಿಣಿಯಾದ ಸೀತಾದೇವಿಗೆ ಈ ನಾಟಕದಲ್ಲಿ ಮರಣಾಂತಪ್ರಸಂಗವಿಲ್ಲ ವೆಂಬುದು ಸೂಚಿತವಾಗಿರುವುದಲ್ಲದೆ, ಸೀತಾರಾಮರ ಪ್ರೇಮಸಂಬಂಧ ಎಷ್ಟು ಗಾಢವೂ ಅವಿಯೋಜ್ಯವೂ ಆದುದೆಂಬುದೂ ಪ್ರಕಟಿತವಾಗಿದೆ. ಪಟ್ಟಾಭಿಷೇಕಮಹೋತ್ಸವದ ಕಾಲವಾದರೂ ಅರಮನೆಯಲ್ಲಿ ಮಂಗಳವಾದ್ಯ ಗಳೊಂದೂ ಮೊಳಗದೆ ಭೀಕರ ಮೌನವಾವರಿಸಿರುವುದು ಮುಂದಿನ ಸಂಗತಿ ಗಳನ್ನು ಸೂಕ್ಷ್ಮವಾಗಿ ಪ್ರತಿಬಿಂಬಿಸುತ್ತದೆ. ಮನೆಯಲ್ಲಿ ದೊಡ್ಡವರೊಬ್ಬರೂ ತುಂಬಿದ ಗರ್ಭಿಣಿಯಾದ ಜಾನಕಿಯನ್ನು ನೋಡಿಕೊಳ್ಳಲು ಉಳಿದಿಲ್ಲ. ಜನ ಅವಳ ಚಾರಿತ್ರದ ವಿಷಯದಲ್ಲಿ ದುರ್ಜನವಾಗಿದೆ. ರಾಜನಿಗೆ ಇದು ತಿಳಿದರೆ ಅನರ್ಥವಾಗಬಹುದಾದರೂ ಋಷಿಗಳ ಮತ್ತು ದೇವತೆಗಳ ಪ್ರಭಾವದಿಂದ ಶುಭಾಂತವಾಗುವ ಆಶ್ವಾಸನೆಯಿದೆ. ಹೀಗೆ ನಾಟಕದ ಪ್ರಸ್ತಾವನೆಯೇ ಒಂದು ರೀತಿಯಲ್ಲಿ ಇಡಿಯ ನಾಟಕದ ಸಂಗ್ರಹದಂತಿದೆ. ಸೂಚನೆಗಳೆಲ್ಲವೂ ಬಹಳ ಸಹಜವಾಗಿ ಬರುತ್ತವೆ.

ಚಿತ್ರದರ್ಶನಾಂಕದಲ್ಲಿ ಒಂದೊಂದು ಸೂಚನೆಯನ್ನೂ ಕವಿ ಯಥೋಚಿತ ವಾಗಿ ವಿಸ್ತರಿಸುತ್ತಾನೆ. ರಾಮನು ಸೀತೆಯನ್ನು ಸಂತೈಸುವ ಮಧುರ ದೃಶ್ಯದಿಂದ ಅಂಕ ಆರಂಭವಾಗುತ್ತದೆ. ಅವರ ದಾಂಪತ್ಯಪ್ರೇಮದ ಸ್ವರ್ಗೀಯ ಪರಿಪೂರ್ಣತೆಯನ್ನು ಕ್ರಮಕ್ರಮವಾಗಿ ಚಿತ್ರಿಸುವುದೇ ಈ ಅಂಕದ ಕೆಲಸ. ಆದರೆ ಜತೆಜತೆಗೇ ನಾಟಕದ ಹಿನ್ನೆಲೆ ಕರುಣರಸೋಚಿತ

ವಾಗುವಂತೆ, ಅಷ್ಟೇ ಅಲ್ಲ, ಮಂಗಳಾಂತನಿರ್ವಾಹವೂ ಕೈತಪ್ಪದಂತೆ, ಕವಿ ಒಂದೊಂದು ಮಾತಿನಲ್ಲೂ ವಿಪುಲವಾದ ವ್ಯಂಜಕತ್ವವನ್ನು ತುಂಬಿ 'ವಶ್ಯವಾಕ್' ಎಂಬ ತನ್ನ ಬಿರುದನ್ನು ಸಾರ್ಥಕಗೊಳಿಸಿದ್ದಾನೆ. ಗ್ರೀಕ್ ದುರಂತನಾಟಕಗಳಲ್ಲಿ ಸೋಫೋಕ್ಲೀಸ್ ಮುಂತಾದವರು ಯಾವ ನಾಟಕೀಯ ಕಾಕುನುಡಿ (Dramatic Irony) ಯ ತಂತ್ರವನ್ನು ಬಹಳ ಮಾರ್ಮಿಕವಾಗಿ ಬಳಸಿರುವರೋ, ಅದೇ ತಂತ್ರವನ್ನು ಭವಭೂತಿಯೂ ಬಹಳ ಯಶಸ್ವಿಯಾಗಿ ಬಳಸಿಕೊಂಡಿದ್ದಾನೆ—ಈ ಮೊದಲನೆಯ ಅಂಕದಲ್ಲಿ. ವಸಿಷ್ಠನ ಸಂದೇಶದಲ್ಲಿ ಎಳೆಯ ವಯಸ್ಸಿನಲ್ಲಿ ರಾಜನಾದವನ ಪ್ರಜಾರಂಜನೆಯ ಬಗೆಗೆ ಬರುವ ಮಾತೂ, ಚಿತ್ರಕಾರನು ಚಿತ್ರಗಳನ್ನು ಸೀತೆಯ ಅಗ್ನಿಪರಿಶುದ್ಧಿಯ ವರೆಗೆ ಮಾತ್ರ ಬರೆದಿರುವನೆಂಬಲ್ಲಿ ಸೀತೆಯ ಗುಣಪರೀಕ್ಷೆಯ ವಿಷಯವೂ, ಸೂಚಿತವಾಗುತ್ತವೆ. 'ತೇ ಹಿ ನೋ ದಿವಸಾ ಗತಾಃ' ಎಂದು ರಾಮನು ಬಾಲ್ಯಸುಖಗಳನ್ನು ಸ್ಮರಿಸುವಾಗಲೂ, ವರ್ತಮಾನಸುಖವನ್ನು ಕುರಿತು ಏನೂ ಹೇಳದೆ ಚಿತ್ರವ್ಯಾಜದಿಂದ ರಾಮನು ಪೂರ್ವಸುಖಗಳನ್ನೇ ಮತ್ತೆ ಮತ್ತೆ ಮೆಲಕುಹಾಕುವಾಗಲೂ ವಿಧಿ ಮುಂದೇನೋ ದುಃಖವನ್ನು ತರಬಹುದೆಂಬ ಭೀತಿಯು ಸ್ಫುಟಾಸ್ಫುಟವಾಗಿ, ಕ್ರಮ ಕ್ರಮವಾಗಿ ಆವರಿಸಿಕೊಳ್ಳುತ್ತದೆ. ಹಿರಿಯರೊಬ್ಬರೂ ಇಲ್ಲದಿರುವುದು ಈ ಅಸ್ಪಷ್ಟಭೀತಿಗೆ ಉಪೋದ್ಬಲಕವಾಗುತ್ತದೆ. ರಾಮನು ವಸಿಷ್ಠನ ಸಂದೇಶವನ್ನು ಕೇಳಿ—

> ಸ್ನೇಹಮನಂತೆಯೆ ದಯೆಯಂ ಸುಖಮುಂ
> ತೊರೆಯಲ್ ಸೀತೆಯನೇ ಕಡೆಗೆ;
> ಜನರಂ ರಂಜಿಪ ಕಾರ್ಯದೊಳೆನಗೆ
> ಮನದಳಲೆಂತೂ ಸಮನಿಸದು (I, ೧೨)

ಎಂದು ತಟ್ಟನೆ ಸಾರುವಾಗ, ಮುಂದೆ ಅರೆಗಳಿಗೆಯಲ್ಲಿ ನಡೆಯಬೇಕಾಗಿರುವುದನ್ನು ತಿಳಿಯದೆ ಆಡುವಾಗ, ಈ ವ್ಯಂಜಕೋಕ್ತಿತಂತ್ರದ ಶಕ್ತಿಯು ಪ್ರೇಕ್ಷಕರಿಗೆ ಹೊಳೆಯುವುದು. ಇನ್ನೂ ಸ್ವಲ್ಪ ಮುಂದೆ ಸೀತಾವಿರಹದ ಚಿತ್ರಗಳನ್ನು ನೋಡುತ್ತಾ ವಿರಹವ್ಯಥೆಯನ್ನು ಮೊದಲಿನಷ್ಟೇ ತೀವ್ರವಾಗಿ ಅನುಭವಿಸುವ ಸನ್ನಿವೇಶದಲ್ಲಿ, ಮತ್ತು ಸೀತೆಯೂ ವಿಹ್ವಲಳಾಗಿ—'ಮಿತಿ ಮೀರುತ್ತಿರುವ ಈ ಮನದಳಲನ್ನು ನೋಡಿದರೆ ನಾನು ಆರ್ಯಪುತ್ರನನ್ನು ಅಗಲಿದಂತೆಯೇ ಎನಿಸುತ್ತಿದೆ' ಎನ್ನುವಾಗ ಭವಿಷ್ಯಾರ್ಥ ಪ್ರೇಕ್ಷಕರ ಮನಃಪಟಲದ ಮೇಲೆ ಸುಳಿದು ಶಂಕೆಯ ಆವರಣವನ್ನು ಮತ್ತಷ್ಟು ಗಾಢವಾಗಿ ಮಾಡುತ್ತದೆ. ಹಾಗೆಯೇ ರಾಮನು ಇನ್ನು ನೋಡಲಾರದೆ 'ಮತ್ತಂ

ಬಂದತ್ತೆನಗೆನಿಪುದಾ ಜಾನಕೀವಿಪ್ರಯೋಗಂ' (I, ೩೩.) ಎಂಬ ಮಾತು, ಮತ್ತು ತನ್ನ ತೊಡೆಯ ಮೇಲೆಯೇ ಸೀತೆ ಸುಖನಿದ್ರೆಗೈಯುತ್ತಿರುವಾಗ—

ಇವಳದೆಲ್ಲವು ಹಿತವೆ, ದುಸ್ಸಹವೊಂದು ವಿರಹವದು

ಎಂದು ಮತ್ತೆ ವಿರಹದ ಮಾತನ್ನೆತ್ತುತ್ತಿರುವಾಗಲೇ ಪ್ರತೀಹಾರಿ ಬಂದು— "ಬಂದಾಯಿತು" ಎನ್ನುವುದು, ಈ ವಿರಹಶಂಕೆಯ ಆವರಣಕ್ಕೆ ಕಳಸವಿಡುತ್ತವೆ. ಚಾರನು ಬಂದನೆನ್ನುವುದು ಪ್ರತೀಹಾರಿಯ ಅರ್ಥವಾದರೂ, ವಿರಹವೇ ಬಂದಿತೆಂಬ ಭಾವನೆ ರಾಮನಿಗೂ ಪ್ರೇಕ್ಷಕರಿಗೂ ಶೂಲದಂತೆ ನಾಟುತ್ತದೆ. ಈ ಉಕ್ತಿತಂತ್ರಕ್ಕೆ ಸಂಸ್ಕೃತದಲ್ಲಿ ಪತಾಕಾಸ್ಥಾನವೆನ್ನುತ್ತಾರೆ. ಹೀಗೆ ಸೀತಾರಾಮರ ಪವಿತ್ರಪ್ರೇಮದ ಜತೆಜತೆಗೇ ಸೀತಾಪರಿತ್ಯಾಗಕ್ಕೆ ಹಿನ್ನೆಲೆಯಾಗುವಂತೆ ಕಲ್ಪಿಸಿರುವ ಅಸ್ಪಷ್ಟಶಂಕೆ, ಭೀತಿಗಳ ಆವರಣ ಸಂಸ್ಕೃತ ಸಾಹಿತ್ಯದಲ್ಲೇ ಒಂದು ಅದ್ವಿತೀಯವೂ ಮನೋಹರವೂ ಆದ ಉದಾಹರಣೆ. ಕವಿ ಈ ಚಿತ್ರಗಳಿಂದಲೇ ನಾಟಕದ ಕ್ರಿಯೆ ಮುಂದುವರಿಯಲು ಸಾಧಕವಾದ ಅಂಶಗಳನ್ನೂ ಪ್ರತಿಪಾದಿಸಿರುವುದು ಅವನ ಕಲೆಯ ಮಹೋನ್ನತಿಯ ನಿದರ್ಶನ. ಚಿತ್ರಗಳೆಲ್ಲವೂ ಸಾಮಾನ್ಯವಾಗಿ ವಿರಹಕಾಲದಲ್ಲಿ ಪ್ರಯೋಜಕಗಳೇ ಹೊರತು ಸಮಾಗಮಕಾಲದಲ್ಲಲ್ಲ. ಇವುಗಳನ್ನು ನೋಡಿಕೊಂಡೇ ರಾಮನು ಮುಂದೆ ಹೇಗೋ ಕಾಲ ನೂಕುವಂತಾಯಿತೆಂಬುದು ಇಲ್ಲಿ ಸೂಚ್ಯಾಂಶ. ಚಿತ್ರದರ್ಶನದಿಂದಲೇ ಸೀತೆಗೆ ಮತ್ತೆ ವನವಿಹಾರದ ಬಯಕೆ ಮೂಡುತ್ತದೆ. ಹಿರಿಯರ ಆದೇಶದಂತೆ ಅವಳ ಬಯಕೆ ಕೂಡಲೇ ಈಡೇರುತ್ತದೆ. ಹೀಗೆ ಸೀತಾಪರಿತ್ಯಾಗಕ್ಕೊಂದು ಪ್ರಬಲ ನಿಮಿತ್ತ ಸಿದ್ಧವಾಗುತ್ತದೆ. ಜೃಂಭಕಾಸ್ತ್ರಗಳು ಸೀತಾಕುಮಾರರಿಗೂ ಬರಲೆಂಬ ರಾಮನ ಹಾರೈಕೆಯೇ ಮುಂದೆ ಲವಕುಶರ ಪ್ರತ್ಯಭಿಜ್ಞಾನಕ್ಕೆ ಪ್ರಮಾಣವಾಗಿ ಪರಿಣಮಿಸುತ್ತದೆ. ಪೃಥ್ವಿಭಾಗೀರಥಿಯರನ್ನು ರಾಮನು ಸೀತೆಯ ರಕ್ಷಣೆಗಾಗಿ ಪ್ರಾರ್ಥಿಸುವುದು ಅಚಿರದಲ್ಲಿಯೇ ಸಾರ್ಥಕವಾಗುತ್ತದೆ. ಅವರಿಬ್ಬರ ರಕ್ಷಣೆಯಿಲ್ಲದಿದ್ದರೆ ಸೀತೆ ಉಳಿಯುವಂತಿರಲಿಲ್ಲ. ಪಂಚವಟೀವರ್ಣನೆಯಲ್ಲಿ ಬರುವ ಒಂದೊಂದು ಶ್ಲೋಕವೂ ಸೀತಾರಾಮರ ದಿವ್ಯಪ್ರೇಮಕ್ಕೆ ಕನ್ನಡಿ ಹಿಡಿದು ರಾಮಸೀತೆಯರಲ್ಲಿ ಪರಸ್ಪರ ಸಂಶಯದ ಪ್ರಸಕ್ತಿಯೇ ಉಂಟಾಗಲಾರದೆಂಬುದನ್ನು ಹೃದಯಂಗಮವಾಗಿ ಬಿಂಬಿಸುತ್ತದೆ. ರಾಮನು ಜನಾಪವಾದವನ್ನು ಕೇಳಿದೊಡನೆ ಆ ಬರಸಿಡಿಲಿನಿಂದ ಬಗೆಗೆಟ್ಟು, ಆವೇಶಭರದಲ್ಲಿ, ಸೀತೆಯನ್ನು ಕಾಡಿಗಟ್ಟಲು ನಿರ್ಣಯಿಸುತ್ತಾನೆ. ತನ್ನನ್ನು ಚಂಡಾಲ, ಕಟುಕ, ಎಂದು

ಪರಿಪರಿಯಾಗಿ ಶಪಿಸಿಕೊಳ್ಳುತ್ತಾನೆ; ತನ್ನ ಅಳಲನ್ನು ತಾಳಲಾರದೆ ಗೋಳಿಡುತ್ತಾನೆ; ಹಳಹಳಿಸುತ್ತಾನೆ. ಹೀಗೆ ಸೀತೆಯ ಪರಿತ್ಯಾಗ ಬುದ್ಧಿಪೂರ್ವಕವಾಗಿ ರಾಮನು ಮಾಡಿದ ಕ್ರೂರಕರ್ಮವೆನಿಸುವುದರ ಬದಲು, ದುಃಖದ ಭರದಲ್ಲಿ ಬುದ್ಧಿಮಂಕಾದಾಗ ಎಸಗಿದ, ಪ್ರಾಣತ್ಯಾಗಕ್ಕಿಂತಲೂ ದಾರುಣವಾದ, ರಾಮನ ಮಹಾತ್ಯಾಗವೆನಿಸುತ್ತದೆ. ಅವನ ಬಗೆಗೆ ಕೋಪಕ್ಕಿಂತಲೂ ಅನುಕಂಪೆಯೇ ಹೆಚ್ಚು ಹುಟ್ಟುವಂತೆ ಭವಭೂತಿ ಈ ಪರಿತ್ಯಾಗಕ್ಕೆ ಉಪಪತ್ತಿ ಕೊಟ್ಟಿದ್ದಾನೆ. ಅದರ ಜತೆಗೇ ಮುಂದಿನ ಪುನರ್ಮಿಲನವನ್ನು ಸೂಚಿಸುವ ಒಂದೆರಡು ಮಾತುಗಳನ್ನು ಬಹಳ ಔಚಿತ್ಯದಿಂದ ಸೇರಿಸಿದ್ದಾನೆ.

ಒಂದು ಕಡೆ ರಾಮ, ಮತ್ತೊಂದು ಕಡೆ ಸೀತೆ, ಇಬ್ಬರೂ ಹನ್ನೆರಡು ವರ್ಷಗಳ ದೀರ್ಘಕಾಲ ದಾರುಣವಾದ ವಿರಹಾಗ್ನಿಯಲ್ಲಿ ಬೆಂದಮೇಲೆ ಅವರ ಪುನಸ್ಸಮಾಗಮಕ್ಕೆ ಸಹಾಯಕವಾದ ಸಾಮಗ್ರಿಗಳನ್ನು ಕವಿ ೨ ಮತ್ತು ೩ ನೆಯ ಅಂಕಗಳಲ್ಲಿ ಯೋಜಿಸಿದ್ದಾನೆ. ಒಂದು ಕಡೆ ಲವಕುಶರಿಗೆ ಉಪನಯನವಾಯಿತೆಂಬ ಸುದ್ದಿ, ಹನ್ನೊಂದು ವರ್ಷ ಉರುಳಿರುವುದನ್ನು ಸೂಚಿಸುವಂತೆ ಇನ್ನೊಂದು ಕಡೆ ಪ್ರಕೃತಿಯ ಗಿಡ, ಮರ, ಪಶು, ನದಿ, ಮುಂತಾದುವುಗಳಲ್ಲೆಲ್ಲ ಬಂದಿರುವ ವ್ಯತ್ಯಾಸಗಳ ವರ್ಣನೆಯೂ ಇದನ್ನೇ ಕಾವ್ಯಮಯವಾಗಿ ಸಮರ್ಥಿಸುತ್ತದೆ. ಬೆಟ್ಟಗಳು ಮಾತ್ರ ಇದ್ದಲ್ಲಿಯೇ ಇವೆ ಎನ್ನುವಾಗ ರಾಮನ ನಿಶ್ಚಲಪ್ರೇಮದ ಧ್ವನಿಯೂ ಉಂಟು. ಲವಕುಶರಂತೆ ಚಂದ್ರಕೇತು ಕೂಡ ಸೇನಾನಾಯಕನಾಗುವಂತಾಗಿದ್ದಾನೆ. ಋಷ್ಯಶೃಂಗರ ಯಾಗ ಮುಗಿದಿದೆ. ಈ ಸಕಾಲದಲ್ಲಿ ರಾಮನು ಮತ್ತೆ ಪಂಚವಟಿಗೆ ಬರುವಂತೆ ಮಾಡುತ್ತದೆ ಶಂಬೂಕವಧೆ. ರಾಜನಾದ ರಾಮನ ಕೃತಿಗಳೆಲ್ಲವೂ ಇಂತಹವೇ ಆಗಿವೆಯೆಂಬುದು ಅವನ ವಿಷಯದಲ್ಲಿ ಅನುಕಂಪೆಯನ್ನು ಹೆಚ್ಚಿಸುತ್ತದೆ. ತನ್ನ ಮನವೊಪ್ಪದಿದ್ದ ಕಾರ್ಯವನ್ನೂ ರಾಮನು ಕರ್ತವ್ಯವೆಂದು ಮಾಡುವ ಸ್ಥಿತಿ ಮತ್ತೆ ಕಾಣುತ್ತದೆ. ರಾಮನ ಮಾನಸಿಕ ವೇದನೆಗೆ ಸೀತಾಸಹವಾಸಸಾಕ್ಷಿಗಳಾದ ಪಂಚವಟೀ ಪ್ರದೇಶಗಳು ಉದ್ದೀಪಕಗಳಾಗಿ ಪರಿಣಮಿಸಿ ಅವನ ಹೃದಯವನ್ನು ಕರಗಿಸಿ ನೀರುಮಾಡುತ್ತವೆ. ಸೀತೆಯ ವಿಷಯದಲ್ಲಿ ರಾಮನ ಅಜರಾಮರ ಪ್ರೇಮ ಪ್ರಕಟವಾಗುತ್ತಿರುವ ಈ ಸುಸಮಯದಲ್ಲೇ ಅವನ ಹೃದಯ ಒಡೆಯುವುದನ್ನು ತಡೆಯಲು ಕವಿ ಸೀತೆಯನ್ನು ಅದೃಶ್ಯಶರೀರಿಣಿಯಾಗಿ ತಂದುಬಿಡುತ್ತಾನೆ. ರಾಮನ ಹೃದಯದಲ್ಲಿ ಸೀತಾಪ್ರೇಮ ಸ್ವಲ್ಪವೂ ಮಾಸಿಲ್ಲವೆಂಬಂಶ ಆಕೆಗೆ ಪ್ರತ್ಯಕ್ಷವೇದ್ಯವಾಗುತ್ತದೆ. ಅವನನ್ನು ಕಾಣುವ ಮೊದಲು ಪರಿತ್ಯಾಗದ ಅಪಮಾನಕ್ಕಿಂತ ಮೇಲಾಗಿ ತನಗೆ ತಿಳಿಸದೆ ಮೋಸದಿಂದ ತೊರೆದನಲ್ಲಾ

ಎಂಬ ಕರಕರೆ ಅವಳ ಮನಸ್ಸಿನಲ್ಲಿತ್ತು. ಪಂಚವಟಿಯಲ್ಲಿ ರಾಮನ ಶುದ್ಧ ಹೃದಯದ ದರ್ಶನವಾದಮೇಲೆ ಅವಳ ಕೋಪತಾಪಗಳೆಲ್ಲ ಎಲ್ಲಿಯೋ ಮಾಯ ವಾಗುತ್ತವೆ, ಪ್ರೇಮ ಹೊರಸೂಸುತ್ತದೆ. ಪುನರ್ಮಿಲನಕ್ಕೆ ಅವಳ ಹೃದಯ ಕಾತರಿಸುತ್ತದೆ. ಎಷ್ಟರವರೆಗೆಂದರೆ ವಾಸಂತಿ ಒಂದೊಂದೇ ಚುಚ್ಚುನುಡಿ ಯಿಂದ ರಾಮನ ವಿಚಾರಣೆಯನ್ನು ಮುಂದುವರಿಸಲು ಹೊರಟಾಗ ಸೀತೆಯೇ ರಾಮನ ಪಕ್ಷವನ್ನು ವಹಿಸಿ ವಾಸಂತಿ ಮಾಡುತ್ತಿರುವುದು ಸರಿಯಲ್ಲ ವೆನ್ನುತ್ತಾಳೆ. ಹೀಗೆ ಶುದ್ಧಪ್ರೇಮ ಎಂತಹ ಕೋಪತಾಪಗಳನ್ನಾದರೂ ಗೆಲ್ಲುವ ಅಂಶ ಯುಕ್ತಿದೂರವಾದರೂ ಸತ್ಯಸಾರವೆಂಬ ತತ್ವ ಇಲ್ಲಿ ಸ್ಪಷ್ಟವಾಗುತ್ತದೆ.

ಈ ಪುನಸ್ಸಮಾಗಮಕ್ಕೆ ಪೋಷಕವಾಗುವಂತೆಯೇ ಒಂದು ಕಡೆ ಜನ ಕಾದಿಗಳನ್ನು ರಾಮನ ಪ್ರಜಾರಂಜನೆಯ ಅತಿರೇಕ ಬೇಸರಗೊಳಿಸಿದ್ದ ಮಾತೂ, ಮತ್ತೊಂದು ಕಡೆ ಲವಕುಶರ ವರ್ಣನೆಯೂ ಬರುತ್ತದೆ—೪ನೆಯ ಅಂಕದಲ್ಲಿ. ೫ನೆಯ ಅಂಕದಲ್ಲಿ ಬಾಲಕನಾದ ಲವನೂ ತನ್ನ ವೀರಾಲಾಪದಲ್ಲಿ ರಾಮನನ್ನು ಹೀಗಳೆಯುತ್ತಾನೆ. ಅವರಿಗೆ ಸಿದ್ಧಿಸಿರುವ ಜೃಂಭಕಾಸ್ತ್ರ ಪ್ರತ್ಯಭಿಜ್ಞಾನಕ್ಕೆ ದಾರಿಯಾಗುತ್ತದೆ. ರಾಮನ ರಾಜನಿಷ್ಠುರ ನಿಷ್ಠೆಯನ್ನು ಮಕ್ಕಳಿಂದ ಹಿಡಿದು ಮುದುಕರ ವರೆಗೆ ಎಲ್ಲರೂ ದೂಷಿಸುವವರೇ. ಇದು ಮತ್ತೆ ಮತ್ತೆ ಮನವರಿಕೆಯಾದಲ್ಲದೆ ರಾಮನ ಮನಸ್ಸು ಸಮಾಗಮಕ್ಕೆ ಅನುವಾಗು ವಂತಿರಲಿಲ್ಲ.

೬ನೆಯ ಪ್ರತ್ಯಭಿಜ್ಞಾನಾಂಕದಲ್ಲಿ ಒಂದೇ ಕ್ಷಣದಲ್ಲಿ ಸಮಸ್ಯೆಗಳೆಲ್ಲವೂ ಪರಿಹಾರವಾಗುವ ಬದಲು ನಾಟಕೀಯವಾಗಿ, ಕ್ರಮಕ್ರಮವಾಗಿ ಪ್ರತ್ಯಭಿ ಜ್ಞಾನದ ಚಿಹ್ನೆಗಳು ಲಕ್ಷ್ಯಕ್ಕೆ ಬರುತ್ತವೆ. ರಾಮನ ನಿಜವಾದ ಮೃದು ಹೃದಯವನ್ನು ಕಂಡೊಡನೆ, ಅವನು ವಿರಹಾಗ್ನಿಯಿಂದ ಬೆಂದು ಸೊರಗಿದ್ದ ದೃಶ್ಯವನ್ನು ಕಂಡೊಡನೆ, ಜನಕಾದಿಗಳ ಕೋಪಕೂಡ ಶಾಂತವಾಗುತ್ತದೆ; ಮಕ್ಕಳ ಉದ್ಧತವರ್ತನೆಯೂ ತಾನೇತಾನಾಗಿ ಶಮನವಾಗುತ್ತದೆ.

೭ನೆಯ ಅಂಕದಲ್ಲಿ ಭವಭೂತಿ ಗರ್ಭನಾಟಕದ ತಂತ್ರವನ್ನು ಬಹಳ ಸುಂದರವಾಗಿ ಉಪಯೋಗಿಸಿಕೊಂಡಿದ್ದಾನೆ. ಸೀತಾರಾಮರ, ಗುರುಹಿರಿಯರ, ಮತ್ತು ದೇವತೆಗಳ ಇಷ್ಟವೆಲ್ಲಾ ಸಮಾಗಮವೇ ಎಂಬುದು ಇಷ್ಟುಹೊತ್ತಿಗೆ ಮನವರಿಕೆಯಾಗುತ್ತದೆ. ಆದರೆ ಸಮಾಗಮಕ್ಕಿದ್ದ ಒಂದೇ ಒಂದು ಅಡ್ಡಿ— ಪ್ರಜಾಭಿಪ್ರಾಯ. ಅದರ ನಿವಾರಣೆಯೇ ಭವಭೂತಿಯ ಸೀತೆಯ ದುಃಖ ನಾಟಕದ ಗುರಿ. ಮೊದಲೇ ಬೆಣ್ಣೆಯಂತಾಗಿದ್ದ ರಾಮನ ಮನಸ್ಸು ಈಗ ಸಂಪೂರ್ಣವಾಗಿ ಕರಗಿ ಸೀತಾ ಸಮಾಗಮಕ್ಕಾಗಿ ಹಾತೊರೆಯುವು

ದರಲ್ಲಿಯೂ ಆಶ್ಚರ್ಯವಿಲ್ಲ. ನಾಟಕ ಮಂಗಳಾಂತವಾಗಿ ಮುಗಿಯುತ್ತದೆ—ಅರುಂಧತಿ, ವಾಲ್ಮೀಕಿ, ಭಾಗೀರಥಿ, ಭೂದೇವಿಯರ ಸಹಾಯದಿಂದ.

ಹೀಗೆ ನಾಟಕದ ಉದ್ದಕ್ಕೂ ಬರುವ ಸನ್ನಿವೇಶ ರಚನೆ ಮತ್ತು ಕಥಾ ಸಂವಿಧಾನ ಭವಭೂತಿಯ ಪ್ರತಿಭೆಯ ಫುಲ್ಲಪುಷ್ಪವೇ ಹೊರತು ರಾಮಾಯಣದಲ್ಲಿದ್ದುದರ ಪಡಿಸೆಳಲಲ್ಲ. ರಾಮನ ಹೃದಯದಲ್ಲಡಗಿದ್ದ ಭಾವನೆಗಳನ್ನು ಸೀತೆಯ ಪರವಾಗಿ ಹೊರಹೊಮ್ಮಿಸುವ ವಾಸಂತಿ ಭವಭೂತಿಯ ಸ್ವಂತ ಸೃಷ್ಟಿ. ಚಿತ್ರದರ್ಶನಾಂಕದ ನಿರ್ಮಾಣಕ್ಕೆ ಕಾಳಿದಾಸನ

ತಯೋರ್ಯಥಾಪ್ರಾರ್ಥಿತಮಿಂದ್ರಿಯಾರ್ಥಾ-
ನಾಸೇದುಷೋಃ ಸದ್ಮಸು ಚಿತ್ರವತ್ಸು |
ಪ್ರಾಪ್ತಾನಿ ದುಃಖಾನ್ಯಪಿ ದಂಡಕೇಷು
ಸಂಚಿಂತ್ಯಮಾನಾನಿ ಸುಖಾನ್ಯಭೂವನ್ ||
(ರಘುವಂಶ XIV, 25)

ಎಂಬ ಶ್ಲೋಕದಿಂದ ಪ್ರಚೋದನೆ ದೊರೆತಿರಬಹುದು. ಒಂದು ಮಾತಿನಿಂದ ಒಂದು ಅಂಕವನ್ನೇ ಯೋಜಿಸಿರುವ ಕವಿಪ್ರತಿಭೆಗೆ ಇದು ಭೂಷಣವೇ ಹೊರತು ದೂಷಣವಲ್ಲ. ಹಾಗೆಯೇ ಪ್ರತ್ಯಭಿಜ್ಞಾನಾಂಕದ ರಚನೆಯಲ್ಲಿಯೂ ಕಾಳಿದಾಸನ ಶಾಕುಂತಲದಲ್ಲಿ ಬರುವ ಪುನರ್ಮಿಲನದ ವಸ್ತು ಭವಭೂತಿಗೆ ಸ್ಫೂರ್ತಿಯಿತ್ತಿರಬಹುದು. ವಸ್ತುತಃ ಕಾಳಿದಾಸನ ಆ ದೃಶ್ಯಕ್ಕಿಂತಲೂ ಭವಭೂತಿಯ ಈ ದೃಶ್ಯ ಮತ್ತೂ ಪ್ರಭಾವಶಾಲಿಯಾಗಿದೆಯೆಂದು ರಸಿಕರಿಗೆ ತೋರಬಹುದು. ಪರಿತ್ಯಾಗದ ಪಾರುಷ್ಯ ಕಡಿಮೆಯಾಗಲು ನಾಯಕ ನಾಯಕಿಯರಿಬ್ಬರಿಗೂ ಪರಸ್ಪರ ಪ್ರತ್ಯಕ್ಷಾನುಭವದಿಂದಲೇ ಕೋಪತಾಪಗಳು ತೊಲಗಿ ಹೃದಯಪರಿವರ್ತನೆಯಾಗಬೇಕೆಂಬ ತತ್ವವನ್ನು ಭವಭೂತಿ ಎತ್ತಿ ತೋರಿಸಿದ್ದಾನೆ. ಸೀತೆಯೇ ಛಾಯಾರೂಪದಿಂದ ರಾಮನ ಹೃದಯಾಂತರಾಳವನ್ನರಿಯುತ್ತಾಳೆ. ರಾಮನೇ ಗರ್ಭನಾಟಕದಲ್ಲಿ ಪ್ರತ್ಯಕ್ಷವಾಗಿ ಸೀತೆಯ ಯಾತನೆಯನ್ನು ಕಾಣುತ್ತಾನೆ. ಅಂತಹ ಸಮಾಗಮ ಸಾಧ್ಯವಾಗಬೇಕಾದರೆ ಆ ದಂಪತಿಗಳ ಅನುರಾಗವೂ ಅಷ್ಟೇ ಅಮರವಾಗಿರಬೇಕೆಂಬುದನ್ನೂ ಭವಭೂತಿ ಮತ್ತೆ ಮತ್ತೆ ವರ್ಣಿಸುತ್ತಾನೆ. ಕಾಳಿದಾಸನ ಶಾಕುಂತಲವೂ ಈ ದೃಷ್ಟಿಯಿಂದ ಭವಭೂತಿಯ ಕೃತಿಗೆ ಒಂದು ಕೈ ಬೀಳಾಗುತ್ತದೆ. ಯಾವುದೋ ವನಾಂತರದಲ್ಲಿ ಕೇವಲ ಕೆಲವು ದಿನಗಳ ವಿಹಾರದಿಂದ ಶಕುಂತಲಾದುಷ್ಯಂತರಲ್ಲಿ ಸೀತಾರಾಮರಲ್ಲಿದ್ದಂತಹ ಪವಿತ್ರದಾಂಪತ್ಯಪ್ರೇಮ ರೂಢಮೂಲವಾಯಿತೆಂದು ತಿಳಿಯುವುದು ಕಷ್ಟ. ದುಷ್ಯಂತನು ಶಕುಂತಲೆಯನ್ನು ಮರೆತಮೇಲೆ

ಆಕೆ ಸ್ವತಃ ಬಂದು ದುಷ್ಯಂತನ ಪರಿತಾಪವನ್ನು ಕಂಡು ಸಮಾಧಾನಗೊಳ್ಳುವ ಸನ್ನಿವೇಶ ಮೊದಲೇ ಇಲ್ಲ. ಸಾನುಮತಿಯ ಮಾತನ್ನು ಅವಳು ಕೇಳಿಕೊಳ್ಳಬೇಕು, ಅಷ್ಟೆ. ಬಹುಪತ್ನೀಕನಾದ ದುಷ್ಯಂತನ ಪ್ರೇಮವೇ ಭ್ರಮರಚಂಚಲವಿರಬಹುದೆಂಬ ಸಂಶಯ ನಾಟಕದಲ್ಲಿ ತಪ್ಪದಿರುವುದರಿಂದ ಅವನ ಪರಿತಾಪವಾದರೂ ಅಷ್ಟು ಪ್ರಬಲವಾಗಿದ್ದಿರಲಾರದೆಂಬ ಸಂಶಯಕ್ಕೆಡೆಯಿಲ್ಲದಿಲ್ಲ. ಹೀಗೆ ಕಾಳಿದಾಸನ ನಾಟಕರತ್ನದ ಸಾರವನ್ನು ಬಟ್ಟಿಯಿಳಿಸಿಕೊಂಡು ಅದಕ್ಕೆ ಇನ್ನಷ್ಟು ಮೆರುಗನ್ನಿತ್ತಿರುವ ಮಹಾಪ್ರತಿಭೆ ಭವಭೂತಿಯದೆಂದು ಒಪ್ಪಬೇಕು. ಅದರಿಂದಲೇ ಪ್ರಾಚೀನ ಸಹೃದಯರು 'ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ' ಎಂದಿರುವುದು. ಭವಭೂತಿಯ ಪ್ರೇಮಮೀಮಾಂಸೆ ಕಾಳಿದಾಸನದಕ್ಕಿಂತಲೂ ತಲಸ್ಪರ್ಶಿಯಾದುದು; ಮಾನಸರಾಜ್ಯದ ಪ್ರದರ್ಶನದಲ್ಲಿ ಭವಭೂತಿಯ ಸಾಮರ್ಥ್ಯ ಕಾಳಿದಾಸನದಕ್ಕಿಂತಲೂ ಕಡಿಮೆಯದೇನೂ ಅಲ್ಲ.

ಈ ವಿಮರ್ಶೆಯನ್ನು ಮುಗಿಸುವ ಮೊದಲು ಆಧುನಿಕರಿಗೆ ಕಥಾಸಂವಿಧಾನದೃಷ್ಟಿಯಿಂದ ಇಲ್ಲಿ ಕಾಣಬಹುದಾದ ಒಂದು ದೋಷವನ್ನು ಉಲ್ಲೇಖಿಸಬೇಕಾಗಿದೆ. ಅದೇನೆಂದರೆ ನಾಟಕದಲ್ಲಿ ರಂಗಸ್ಥಲೋಚಿತವಾದ ಕ್ರಿಯೆ ಅತ್ಯಲ್ಪ; ಕಾವ್ಯಮಯವಾದ ವರ್ಣನೆ ಅತ್ಯಧಿಕ. ಇಲ್ಲಿ ಘಟನೆಗಳು ಬಹಳ ಕಡಿಮೆ; ಮಾನಸಿಕ ಭಾವಗಳ ಪ್ರದರ್ಶನ ಹೆಚ್ಚು. ವಸ್ತುತಃ ಇಂದಿನ ಅಭಿರುಚಿಗೆ ಇವು ದೋಷಗಳೇ ಸರಿ. ನಾಯಕನಾದ ರಾಮನು ಮಾಡುವ ಕಾರ್ಯಗಳೆಲ್ಲಾ ಎಷ್ಟೆಂದರೆ—(೧) ಸೀತಾಪರಿತ್ಯಾಗ, (೨) ಲವಣಸಂಹಾರಕ್ಕಾಗಿ ಶತ್ರುಘ್ನಪ್ರೇಷಣ, (೩) ಶಂಬೂಕವಧೆ, (೪) ಲವಕುಶರ ಯುದ್ಧನಿವಾರಣೆ ಮತ್ತು (೫) ಸೀತಾಸ್ವೀಕಾರ. ನಾಯಿಕೆಯಾದ ಸೀತೆ ಮಾಡುವುದೆಲ್ಲಾ (೧) ವನಗಮನ, (೨) ಆತ್ಮಹತ್ಯಾಪ್ರಯತ್ನ, (೩) ರಾಮದರ್ಶನ, ಮತ್ತು (೪) ರಾಮಸಮಾಗಮ. ಉಳಿದ ಪಾತ್ರಗಳೂ ಇವರ ಪರವಾಗಿ ಮಾಡುವ ಕಾರ್ಯ ಬಹಳ ಅಲ್ಪ. ವಸಿಷ್ಠರು ಸಂದೇಶ ಕಳಿಸುತ್ತಾರೆ, ವಾಲ್ಮೀಕಿಗಳು ನಾಟಕವಾಡಿಸುತ್ತಾರೆ, ಪೃಥ್ವಿಗಂಗೆಯರು ಸೀತೆಯನ್ನು ರಕ್ಷಿಸಿ ಕಡೆಗೆ ರಾಮನಿಗೆ ತಂದೊಪ್ಪಿಸುತ್ತಾರೆ, ಲವಕುಶರು ರಾಮಾಯಣ ಕಥೆ ಹೇಳುತ್ತಾರೆ. ಆದ್ದರಿಂದ ಮುದ್ರಾರಾಕ್ಷಸ, ಮೃಚ್ಛಕಟಿಕ, ಮಾಲತೀಮಾಧವ ಮುಂತಾದ ಕಥೆಗಳಲ್ಲಿರುವ ಘಟನಾಬಾಹುಲ್ಯವನ್ನಾಗಲಿ, ಕ್ರಿಯಾವೈಪುಲ್ಯವನ್ನಾಗಲಿ, ಈ ನಾಟಕದಲ್ಲಿ ಕಾಣಬರುವಂತಿಲ್ಲ. ಆದರೆ ನಾಟಕದ ವಸ್ತುವೇ ಹೃದಯಪರಿವರ್ತನೆಯೆಂಬುದನ್ನು ಗ್ರಹಿಸಿದರೆ ತದನುಗುಣವಾಗಿ ಪಾತ್ರಗಳಲ್ಲೆಲ್ಲ ಭಾವತೀವ್ರತೆ ಮತ್ತು ಹೃದಯಾಂತರಾಳದ

ಅಭಿವ್ಯಕ್ತಿ ಇವೇ ಪ್ರಧಾನವಾಗುವುದು ಅಸಂಗತವೆನಿಸಲಾರದು. ಭಾರತೀಯರ ರಸದೃಷ್ಟಿಯಿಂದ ಇದು ಉತ್ತಮೋತ್ತಮ ನಾಟಕವೆಂದೇ ಆಗುತ್ತದೆ. ಆದರೆ ಭವಭೂತಿಯಲ್ಲಿ ಭಾಸನ ರಂಗೋಚಿತತ್ವ ಕಡಿಮೆಯಾಗಿ, ವರ್ಣನೆಗಳ ಅತ್ಯಾದರ ಹೆಚ್ಚಿದೆಯೆಂದು ಹೇಳದಿರುವಂತಿಲ್ಲ. ಹೀಗೆ ಯಾವುದು ರಸದೃಷ್ಟಿಯಿಂದ ಗುಣವೋ ಅದೇ ಕೇವಲ ಕಥಾದೃಷ್ಟಿಯಿಂದ ನೋಡಿದಾಗ ನ್ಯೂನತೆಯಾಗುತ್ತದೆ. ಉತ್ತರರಾಮಚರಿತೆಯಲ್ಲಿ ಕಥೆಯೇ ಇಲ್ಲವೆಂದರೂ ಸಲ್ಲುತ್ತದೆ. ಸೀತಾರಾಮರ ವಿಯೋಗ, ದೇವರ್ಷಿಗಳ ಪ್ರಭಾವದಿಂದ ಪುನಸ್ಸಮಾಗಮ, ಇಷ್ಟೇ ಇಲ್ಲಿರುವ ಕಥೆಯೆಲ್ಲ. ಕಥೆಯೇ ಇಲ್ಲದಿರುವಾಗ ಕಥೆಯ ಬೆಳೆವಳಿಗೆಯನ್ನು ನಿರ್ದೇಶಿಸುವ ಪ್ರಶ್ನೆಯೇ ಇಲ್ಲ. ಆದರೆ ರಸೋಚಿತವಾದ ಆವರಣನಿರ್ಮಾಣದಲ್ಲಿ ಭವಭೂತಿಯ ಕಲೆ ಅದ್ವಿತೀಯವಾದುದೆಂದೊಪ್ಪಬೇಕು. ನಾಟಕದಲ್ಲಿ ಭಾವಗೀತೆಯ ಜಾತಿಯ ಕಾವ್ಯಗುಣ ಅತಿಶಯವಾಗಿರುವುದನ್ನು ಸಹಾನುಭೂತಿಯಿಂದ ನೋಡಿದರೆ ಮೆಚ್ಚಬಹುದಾಗಿದೆ. ಗೀತರೂಪಕಗಳಂತೆ ಈ ನಾಟಕವೂ ರಂಗಸ್ಥಳದಲ್ಲಿ ತನ್ನದೇ ಆದ ಆಕರ್ಷಣೆಯನ್ನು ಉಳಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ.

## ೪. ಪಾತ್ರಚಿತ್ರಣ

ಕಥಾಭಾಗ ಕಡಿಮೆಯಾದುದೇ ಪಾತ್ರ ಸ್ವಭಾವ ನಿರೂಪಣೆಯ ದೃಷ್ಟಿಯಿಂದ ಕವಿಗೆ ಸಹಾಯಕವಾಯಿತು. ಭವಭೂತಿ ರಾಮ-ಸೀತೆಯರ ಪಾತ್ರಚಿತ್ರಣದಲ್ಲಿ ಅಪೂರ್ವವಾದ ಕಲಾಕೌಶಲವನ್ನು ಮೆರೆದಿದ್ದಾನೆ. ಸಾಕ್ಷಾತ್ ದೇವತಾಪುರುಷನೇ ರಾಮನೆಂಬ ಕಲ್ಪನೆಯಿದ್ದಾಗ, ರಾಮನ ಕಾರ್ಯಗಳು ದೋಷದೂರವಾದ ಆದರ್ಶಗಳೇ ಎಂಬ ಪ್ರತೀತಿಯಿದ್ದಾಗ, ರಾಮನು ಸೀತಾಪರಿತ್ಯಾಗ ಮಾಡಿದುದು ಪ್ರೇಮದ್ರೋಹವಲ್ಲವೆಂದು ತೋರಿಸುವ ಕಷ್ಟತಮ ಕೆಲಸ ಭವಭೂತಿಯ ಪಾಲಿಗೆ ಬಂದಿತು. ಈ ಕೆಲಸವನ್ನು ಯಶಸ್ವಿಯಾಗಿ ಸಾಧಿಸಲು ಕವಿ ರಾಮನನ್ನು ಮಾನವನನ್ನಾಗಿ ಮಾಡಿದ್ದಾನೆ. ಈ ಮಾನವೀಯತೆಯ ಸಂಸ್ಪರ್ಶದಿಂದ ರಾಮನ ಮನಸ್ಸಿನಲ್ಲಿ ನಡೆದ ಎರಡು ಧರ್ಮಗಳ ಘನ-ಘೋರ-ಘರ್ಷಣೆ ಸಾರ್ವಕಾಲಿಕವಾದ ಸ್ವಾರಸ್ಯವನ್ನು ಉಳಿಸಿಕೊಳ್ಳುವಂತಾಗಿದೆ. ರಾಮನ ಪ್ರೇಮವೆಂದರೆ ಸಾಮಾನ್ಯವಾದುದಲ್ಲ; ಸ್ವರ್ಗೀಯವಾದುದು: ಪೂತವೂ ಪರಿಶುದ್ಧವೂ ಆದುದು. ಆ ಪ್ರೇಮದ ಸುಖ-ದುಃಖಗಳಿಗೆ ಭಾಗಿಯಾಗಿ, ತನ್ನ ಹೃದಯವನ್ನೆಲ್ಲ ಸೀತೆಗೆ ಸೂರೆಗೊಟ್ಟ ವ್ಯಕ್ತಿ ರಾಮನೇ ಹೊರತು ನೂತನ ನೃಪಾಲನಾದ ರಾಜನಷ್ಟೇ ಅಲ್ಲ.

"ಅದ್ವೈತಂ ಸುಖ-ದುಃಖಯೋಃ ..." (೧. ೩೯) ಎಂಬ ವರೆಗೂ ರಾಮನ
ಹೃದಯ ಸೀತೆಯೊಡನೆ ಸಮ್ಮಿಳಿತವಾಗಿತ್ತೆಂದ ಮೇಲೆ ಒಬ್ಬರನ್ನೊಬ್ಬರು
ವಿಮರ್ಶಿಸಿ ಒರೆಹಚ್ಚಿ ನೋಡುವ ಪ್ರಸಂಗವೇ ಆ ಪ್ರೇಮರಾಜ್ಯದಲ್ಲಿ ಅಸಂಭವ.
ಆದರೆ ರಾಜಧರ್ಮದ ಆದರ್ಶ ಪ್ರಜೆಗಳಿಗೆ ಮಣಿಯಬೇಕೆಂದಿದ್ದಾಗ,
ಪ್ರಜಾಭಿಪ್ರಾಯವು ಸೀತೆಯಲ್ಲಿ ಕುಂದಿಟ್ಟರೆ, ತಾನು ಸೀತೆಯೊಡನೆ ಬಾಳು
ವುದು ರಾಜಧರ್ಮಕ್ಕೆ ಲೋಪವಾಗುತ್ತಿದ್ದಿತು. ರಾಜಧರ್ಮಕ್ಕೂ ಪತಿ
ಧರ್ಮಕ್ಕೂ ಘರ್ಷಣೆಯೊದಗಿದಾಗ, ವಿಧಿಯಿಲ್ಲದೆ ರಾಜಧರ್ಮಕ್ಕೆ ಪತಿಧರ್ಮ
ವನ್ನು ಬಲಿಗೊಟ್ಟ, ತನ್ನ ಪ್ರಾಣತ್ಯಾಗಕ್ಕಿಂತಲೂ ಹೆಚ್ಚಿನ ಸೀತಾಪರಿತ್ಯಾಗ
ವೆಂಬ ಮಹಾತ್ಯಾಗ ಮಾಡಿದ ಮಹಾಪುರುಷನೇ ರಾಮನೆಂದು ಕವಿ
ಬಣ್ಣಿಸುತ್ತಾನೆ. ತಾನು ಸೀತಾ ಪ್ರೇಮಕ್ಕೆ ಪಾತ್ರನಾಗಿದ್ದುದಕ್ಕೆ ಇಂತಹ
ಹೇಯಕೃತ್ಯ ಮಾಡಿದೆನಲ್ಲಾ ಎಂದು ಕಣ್ಣೀರಿನಲ್ಲಿ ಕೈತೊಳೆಯುತ್ತಾ ಪ್ರತಿ
ಕ್ಷಣವೂ ಪ್ರಾಯಶ್ಚಿತ್ತಮಾಡಿಕೊಳ್ಳುತ್ತಿದ್ದ ಮಹಾತ್ಮ ರಾಮ! ಆ ಸಂತಾಪದ
ಅಗ್ನಿ, ಆ ಕಣ್ಣೀರಿನ ಕಡಲು, ತನ್ನನ್ನು ಅಪರಾಧಿಯೆಂದು ನಿರ್ಣಯಿಸಿದ್ದ
ವಾಸಂತಿ, ಸೀತೆ, ಜನಕ, ವಾಲ್ಮೀಕಿ, ಭೂದೇವಿ ಎಲ್ಲರ ಮನಸ್ಸನ್ನೂ
ಮಾರ್ಪಡಿಸುವಂತಹುದು. ಸೀತಾಪರಿತ್ಯಾಗದ ಕ್ಷಣದಿಂದಾಚೆಗೆ ರಾಜ
ಕಾರ್ಯಕ್ಕೆಂದು ರಾಮನ ಆಕೃತಿಯೊಂದು ಗೊಂಬೆಯಂತೆ ಉಳಿದಿತ್ತೇ
ಹೊರತು ರಾಮನ ಹೃದಯ ಸಾವಿರ ಹೋಳಾಗಿ ಸೀಳಿಹೋಗಿತ್ತು.
ಸೀತೆ ಕಾಡಿನಲ್ಲಿ ಯಾವ ಘೋರಯಾತನೆಗೆ ಗುರಿಯಾದಳೋ ಅದಕ್ಕೆ
ಕಡಿಮೆಯಲ್ಲದ ನರಕಯಾತನೆಗೆ ಅವಳ ರಾಮನೂ ಗುರಿಯಾಗಿದ್ದನು.
ಈ ಜೀವನಕ್ಕಿಂತ ಮರಣ ನೂರ್ಮಡಿ ಲೇಸಾಗಿರುತ್ತಿತ್ತು. ದಶರಥನು
ಮಾತನ್ನು ಉಳಿಸಿಕೊಳ್ಳಲು ಪ್ರಾಣವನ್ನಷ್ಟೇ ಕೊಟ್ಟನು; ರಾಮನು ಪ್ರಜೆ
ಗಳನ್ನು ಮೆಚ್ಚಿಸಲು ಪ್ರಾಣಕ್ಕಿಂತ ಹೆಚ್ಚಿನ ಸೀತೆಯನ್ನು ಕೊಟ್ಟನು; ಜೀವನ
ದಲ್ಲಿ ಸುಖದ ಆಶೆಗೇ ತಿಲಾಂಜಲಿ ಕೊಟ್ಟನು. ರಾವಣನನ್ನು ಕೊಲ್ಲಲು ಯಾವ
ಕೆಚ್ಚೆದೆ ಬೇಕಾಯಿತೋ ಅದಕ್ಕಿಂತ ನೂರ್ಮಡಿ ಹೆಚ್ಚಿನ ಕಲ್ಲೆದೆಯಿಂದ
ಹಾರಿಹೋಗುತ್ತಿದ್ದ ತನ್ನ ಪ್ರಾಣಪಕ್ಷಿಯನ್ನು ತಡೆಹಿಡಿದು ರಾಜ್ಯಸೂತ್ರ
ವನ್ನು ನಡೆಸುತ್ತಿದ್ದನು. ಈ ರಾಜನಿಗೆ ನಿರಪರಾಧಿಯಾದ ತಪಸ್ವಿಯನ್ನು
ಕೊಲ್ಲುವುದು ಏನೂ ಕಠಿನವಾಗುವುದಿಲ್ಲ; ಎದೆಯೇ ಹೋಳಾಗಿ ಹೋಗಿರು
ವುದರಿಂದ—"ಸೀತಾವಿವಾಸನಪಟೋಃ ಕರುಣಾ ಕುತಸ್ತೇ!" ಅಂತಹ
ರಾಮನಿಗೂ ಹನ್ನೆರಡು ವರ್ಷ ತಡೆಹಿಡಿದ ಶೋಕದ ಕಟ್ಟೆ ಒಮ್ಮೆಲೆ
ಒಡೆದುಹೋಗುವ ಪ್ರಸಂಗವೊದಗಿತು—ಮತ್ತೆ ಪಂಚವಟಿಗೆ ಶಂಬೂಕವಧೆ

ಗೆಂದು ಹೋದಾಗ. ಆಗಲೂ ಸೀತೆಯ ಪಾಣಿಸ್ಪರ್ಶವೊಂದೇ ಅವನ ಹೋಗುತ್ತಿದ್ದ ಜೀವವನ್ನುಳಿಸುವ ಸಂಜೀವನ. ಹೀಗೆ ರಾಮನ ಪ್ರೇಮದ ಆಳವನ್ನು ಭವಭೂತಿ ಸುಂದರವಾಗಿ ತೋರಿಸುತ್ತಾನೆ. ರಾಮನು ಮನುಷ್ಯಸಹಜವಾದ ಕರ್ತವ್ಯಭ್ರಾಂತಿಗೂ ಗುರಿಯಾಗಿದ್ದನೆಂದು ಸ್ಪಷ್ಟ ಪಡಿಸುತ್ತಾನೆ. ಹೀಗೆ ಒಂದು ಪಾತ್ರದ ಮಾನಸಿಕ ಪ್ರಪಂಚವನ್ನು ಪದರ ಪದರವಾಗಿ, ಎಳೆಎಳೆಯಾಗಿ ಬಿಡಿಸುವ ಸಂಸ್ಕೃತ ನಾಟಕಕಾರರು ವಿರಲ. ಇದೇ ಈ ನಾಟಕದ ಮಹೋನ್ನತಿಯ ಮರ್ಮ. ರಾಮನ ಪಾತ್ರ ವಜ್ರ ಕ್ಕಿಂತಲೂ ಕಠೋರವೆನಿಸಿದರೂ, ವಾಸ್ತವದಲ್ಲಿ ಕುಸುಮಕ್ಕಿಂತ ಮೃದು.

ರಾಮನ ಪಾತ್ರದಂತೆ ಸೀತೆಯ ಪಾತ್ರದಲ್ಲೂ ಭವಭೂತಿ ತನ್ನ ಕಲೆಯನ್ನು ತೋರಿಸಿದ್ದಾನೆ. ರಾಮನನ್ನು ನೋಡುವ ವರೆಗೆ, ಅವನು ತನಗೆ ತಿಳಿಸದೆ ಹಾಗೆ ಕಾಡಿಗಟ್ಟಿದ್ದು ಸರಿಯೆ ಎಂಬ ಶಂಕೆ ಅವಳ ಮನಸ್ಸಿನಲ್ಲಿತ್ತು; ಕೋಪವೂ ಇತ್ತು; ಆದರೂ ಪ್ರೇಮದ್ರೋಹದ ಕಲ್ಪನೆ ಅವಳ ಮನಸ್ಸಿನಲ್ಲಿ ಎಂದೂ ಸುಳಿದಿರಲಿಲ್ಲ. ಆದರೆ ರಾಜಕಾರ್ಯದ ವಿಷಯವನ್ನು, ಅದೂ ಇಂತಹ ಘೋರ ವಿಷಯವನ್ನು, ತನಗೆ ತಿಳಿಸುವುದು ರಾಮನಿಗೆ ಹೇಗೆ ಅಶಕ್ಯವಾಯಿತೆಂಬುದೂ, ರಾಮನ ಸಂತಾಪ ಎಷ್ಟು ತೀವ್ರವಾಗಿತ್ತೆಂಬುದೂ ಅವಳಿಗೆ ಪ್ರತ್ಯಕ್ಷ ವಾದೊಡನೆಯೇ ಅವಳ ಅಂತಃಕರಣ ಕರಗಿಹೋಗುತ್ತದೆ. ವಾಸಂತಿ ನ್ಯಾಯಾಧಿಪತಿಯಂತೆ ರಾಮನ ಚರ್ಯೆಯನ್ನು ವಿಮರ್ಶಿಸಿ ಕಡೆಯವರೆಗೂ ವಿಚಾರಣೆ ಮಾಡಹೊರಟರೆ ಸೀತೆಯ ಪ್ರೇಮಲಹೃದಯಕ್ಕೆ ಅದನ್ನು ತಡೆಯ ಲಾಗುವದಿಲ್ಲ. ತನ್ನ ಮೇಲಣ ಪ್ರೀತಿ ಅಳಿದಿಲ್ಲವೆಂದು ತಿಳಿದೊಡನೆ ಆಕೆ ತನ್ನ ಪ್ರೇಮವನ್ನು ವರ್ಷಿಸಲು ಸಿದ್ಧಳಾಗುತ್ತಾಳೆ. ರಾಮನ ಪ್ರೀತಿಶಪಥ ವನ್ನು ಕೇಳುವ ಅಜ್ಞಾತವಾಸವನ್ನೇ ಅರಮನೆಯ ವಾಸಕ್ಕಿಂತ ಹೆಚ್ಚೆಂದು ಹೊಗಳುತ್ತಾಳೆ. ಈ ಭಾಗವನ್ನೋದುವಾಗ ಪ್ರೇಮದ ಆಳವನ್ನು ಭವಭೂತಿ ಮುಟ್ಟಿದಂತೆ ಕಾಳಿದಾಸನೂ ಮುಟ್ಟಲಿಲ್ಲವೋ ಎನಿಸುತ್ತದೆ. ಯಾವ ಕಾರ್ಯ ವನ್ನು ತರ್ಕಬದ್ಧವಾದ ಮನಸ್ಸು ಎಂದಿಗೂ ಒಪ್ಪಲಾರದೋ, ಅದನ್ನೇ ತರ್ಕದೂರವಾದ ಅಂತಃಕರಣ ಮೆಚ್ಚಿಕೊಳ್ಳುವಂತೆ ಭವಭೂತಿ ತನ್ನ ಜಾಣ್ಮೆಯನ್ನು ಮೆರೆದಿದ್ದಾನೆ.

ಭವಭೂತಿ ಶ್ರೀರಾಮನ ಪಾತ್ರಕ್ಕೆ ಎಷ್ಟು ಸಹಾನುಭೂತಿ ತೋರಿ ಸಿರುವನೋ ಅಷ್ಟೇ ಸಹಾನುಭೂತಿಯನ್ನು ಸೀತೆಗೂ ತೋರಿಸಿರುವನೇ ಎಂಬ ಪ್ರಶ್ನೆಯೇಳುವುದು ಸಹಜ. ರಾಮನ ದೃಷ್ಟಿ ಏನೇ ಆಗಿರಲಿ—ಸೀತೆ ಮಾಡಿದ್ದ ತಪ್ಪೇನು ಅಂತಹ ಘೋರ ಶಿಕ್ಷೆಯನ್ನನುಭವಿಸಲು ? ಎನ್ನಿಸುತ್ತದೆ. ಇದಕ್ಕೆ

ಅವಳ ಪ್ರತಿಕೂಲದೈವವೇ ಕಾರಣವೆನ್ನಬಹುದೇ ಹೊರತು ಮತ್ತೇನೂ ಉತ್ತರ ಸಿಕ್ಕುವುದಿಲ್ಲ. ಹೆಣ್ಣು ಕಷ್ಟವನ್ನನುಭವಿಸುವುದರಲ್ಲಿ ಅವಳ ಮಹತ್ವವಿದೆಯೇ ಹೊರತು ಎದುರಿಸಿ ಪ್ರತಿಭಟಿಸುವುದರಲ್ಲಲ್ಲ ಎಂಬ ಭಾವನೆ ಪ್ರಾಚೀನಭಾರತದಲ್ಲಿತ್ತು. ಸೀತೆ ಸಾಧ್ವೀಮಣಿಯಾಗಿ, ಪತಿವ್ರತಾ ಶಿರೋಮಣಿಯಾಗಿ, ಬೆಳಗುವದು ಅವಳ ಕಷ್ಟಸಹಿಷ್ಣುತೆಯಿಂದಲೇ. ಆ ಕಷ್ಟಸಹನೆಗೆ ಪತಿಪ್ರೇಮದ ಪೂರ್ಣವಿಶ್ವಾಸ ಅಗತ್ಯ ಎಂಬುದೇ ಭವ ಭೂತಿಯ ಅಭಿಮತವಾಗಿದ್ದಿರಬಹುದು. ಇಂದಿನ ದೃಷ್ಟಿಯಿಂದ ನೋಡಿದರೆ ಭವಭೂತಿ ಹೆಣ್ಣಿನ ಆತ್ಮಗೌರವಕ್ಕೆ ಸಾಕಷ್ಟು ಬೆಲೆ ಕೊಡಲಿಲ್ಲ ಎಂದೇ ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಶಿಕ್ಷೆಯನ್ನು ಅವಳಿಗೆ ತಿಳಿಸದೆಯೇ ರಾಮನು ಅವಳನ್ನು ಕಾಡಿಗಟ್ಟುವಂತೆ ಮಾಡುತ್ತಿರಲಿಲ್ಲ.

ಜನಕನ ಪಾತ್ರ ಶಾಕುಂತಲದ ಕಣ್ವರನ್ನು ಸ್ಮರಣೆಗೆ ತರುತ್ತದೆ. ಕಣ್ವರ ಕ್ಷಮೆಗಿಂತಲೂ ಮಾನವಸಹಜವಾದ ಕೋಪವೇ ಜನಕನಲ್ಲಿ ಚಿತ್ರಿತವಾಗಿದೆ. ಅಳಿಯನ ದುರ್ವರ್ತನೆಯನ್ನು ಜನಕ ಸುಮ್ಮನೆ ತಾಳುವಂತಹವನಲ್ಲ. ಆದರೆ ರಾಮನ ಶೋಕತಪ್ತಹೃದಯ ಅವನ ದುಃಖವನ್ನೂ ಶಮನಮಾಡುವಂತಹುದು. ಎಲ್ಲಕ್ಕಿಂತಲೂ ಹೆಚ್ಚಾಗಿ ವಾಲ್ಮೀಕಿಗಳು ಸೀತಾಸಮಾಗಮಕ್ಕೆ ಸೂತ್ರಧಾರ ರಂತೆ ಮೊದಲಿನಿಂದ ಕಡೆಯ ವರೆಗೂ ಚಿತ್ರಿತರಾಗಿದ್ದಾರೆ. ಅವರ ಪಾತ್ರಕ್ಕೆ ಭವಭೂತಿ ವಿಶೇಷ ಸಾರ್ಥಕ್ಯವನ್ನು ತುಂಬಿದ್ದಾನೆ. ಅವರ ಪ್ರಯತ್ನವಿಲ್ಲದೆ ಹೋಗಿದ್ದರೆ ಪ್ರಜೆಗಳ ಮನಃಪರಿವರ್ತನೆಯಾಗಲಿ ಸೀತಾಸಮಾಗಮವಾಗಲಿ ಆಗುತ್ತಲೇ ಇರಲಿಲ್ಲ.

## ೫. ಕರುಣರಸಪ್ರತಿಪಾದನೆ

ಶೋಕದ ಸನ್ನಿವೇಶಗಳೇ ನಾಟಕದ ಸಂವಿಧಾನಕ್ಕೂ ಪಾತ್ರಪುಷ್ಟಿಗೂ ಜೀವಾಳವಾಗಿ ಬಂದಿವೆಯೆಂಬುದು ಈಗಾಗಲೇ ಸ್ಪಷ್ಟವಾಗಿದೆ. ರಾಮನ ಶೋಕವೇ ಅವನ ಪ್ರೇಮದ ಪವಿತ್ರತೆಯ ಮಾನದಂಡವಾಗುತ್ತದೆ ಈ ನಾಟಕದಲ್ಲಿ. ಆ ಶೋಕ ಸದಾ ಅತ್ಯುತ್ಕಟವಾಗಿದ್ದರೂ ಕೆಲವೊಮ್ಮೆ ಕಟ್ಟೆ ಯೊಡೆದುಕೊಂಡು ಹೊರಸೂಸುತ್ತದೆ; ಆದರೆ ಹೆಚ್ಚು ಕಾಲ ಒಳಗೇ ಕುದಿ ಯುತ್ತಿರುತ್ತದೆ. ಭವಭೂತಿಯೇ ಹೇಳುವಂತೆ—

ಅನಿರ್ಭಿನ್ನೋ ಗಭೀರತ್ವಾತ್ ಅಂತರ್ಗೂಢಘನವ್ಯಥಃ |
ಪುಟಪಾಕಪ್ರತೀಕಾಶೋ ರಾಮಸ್ಯ ಕರುಣೋ ರಸಃ ||

ಉ. ರಾ. ಚ. ೩, ೧

[ಗಂಭೀರಚಿತ್ತನಾದ ಕಾರಣ ಹೊರಗೆ ಹೊಳೆಯದಿದ್ದರೂ ಒಳಗೊಳಗೇ ದಾರುಣವಾಗಿ ಕುದಿಯುತ್ತಿರುವ ರಾಮನ ಶೋಕ ಪುಟಕಟ್ಟಿ ಬೆಂಕಿಯಲ್ಲಿ ಹಾಕಿದ ಔಷಧಿ ಮೇಲಿನ ಮಣ್ಣು ಆರಿದರೂ ಒಳಗೆ ಅತಿ ಬಿಸಿಯಾಗಿ ರುವಂತೆ ಸುಡುತ್ತಿದೆ.] ಹಾಗೆಯೇ ಪಂಚವಟಿಯಲ್ಲಿ ಬರುವ ಛಾಯಾ ಸೀತೆ 'ಕರುಣಸ್ಯ ಮೂರ್ತಿರಥವಾ ಶರೀರಿಣೀ ವಿರಹವ್ಯಥೇವ' [ಕರುಣದ ಮೂರ್ತಿ ಅಥವಾ ಶರೀರತಾಳಿದ ವಿರಹವ್ಯಥೆಯಂತೆ] ಕಾಣಿಸುತ್ತಾಳೆ. ಜನಕನು ಕಿಚ್ಚು ಒಳಗೇ ಕವರುವ ಕಟ್ಟಿಗೆಯಂತೆ ಸೀತಾಶೋಕದಿಂದ ತಪಿಸುತ್ತಾನೆ:

ಹೃದಿ ನಿತ್ಯಾನುಷಕ್ತೇನ ಸೀತಾಶೋಕೇನ ತಪ್ಯತೇ |
ಅಂತಃಪ್ರಸುಪ್ತದಹನೋ ಜರನ್ನಿವ ವನಸ್ಪತಿಃ || (೪, ೨)

ಗರಗಸದಂತೆ ಅವನ ಹೃದಯಮರ್ಮವನ್ನು ವ್ಯಥೆ ಕೊಯ್ಯುತ್ತದೆ. ಕೌಸಲ್ಯೆ ಅರುಂಧತಿಯರ ಪಾಡೂ ಅಷ್ಟೇ ; ಭಾಗೀರಥಿ ಭೂದೇವಿಯರಾಗಲಿ, ಆತ್ರೇಯಿ ವಾಸಂತಿಯರಾಗಲಿ ಈ ಶೋಕಪ್ರವಾಹದ ಸೆಳೆತಕ್ಕೆ ಸಿಕ್ಕದೆ ಉಳಿಯುವಂತಿಲ್ಲ. ಪರದೇಸಿಗಳಂತೆ ಬೆಳೆಯುತ್ತಿರುವ ಲವಕುಶರ ಸ್ಥಿತಿಯೂ ಕರುಣೆಗೆ ಸಾಮಗ್ರಿಯೇ. ಹೀಗೆ ಮೊದಲ ಅಂಕದಿಂದ ಕಡೆಯ ಅಂಕದ (ಅಲ್ಲಿಯೇ ಸೀತೆಯ ಪ್ರಾಣಪರಿತ್ಯಾಗದ ಹೃದಯವಿದ್ರಾವಕ ದೃಶ್ಯ ಬರುವುದು) ತನಕ ಬೇರೆ ಬೇರೆ ಪಾತ್ರಗಳಲ್ಲಿ ಮತ್ತೆ ಮತ್ತೆ ಶೋಕವು ಉಕ್ಕುತ್ತದೆ; ಹೊಸ ಹೊಸ ರೂಪಾಂತರಗಳನ್ನು ತಳೆಯುತ್ತದೆ. ದೇವತೆಗಳ ಮತ್ತು ಋಷಿಗಳ ಪುಣ್ಯಪ್ರಭಾವದಿಂದ ಶೋಕತಪ್ತರಿಗೆಲ್ಲ ಕಡೆಗೆ ಮಂಗಳದ ಶಾಂತಿಯೂ ಸಿಕ್ಕುತ್ತದೆ. ನಾಟಕದ ಉದ್ದಕ್ಕೂ ಬೇರೆ ಬೇರೆ ಸ್ಥಾಯಿಗಳಲ್ಲಿ ಶೋಕ ಉಕ್ಕಿ ಪ್ರೇಕ್ಷಕರ ಹೃದಯವನ್ನು ಕರಗಿಸುವಂತಿರುವ ಈ ಅಂಶವನ್ನೇ ಭವಭೂತಿ—

ಏಕೋ ರಸಃ ಕರುಣ ಏವ ನಿಮಿತ್ತಭೇದಾದ್
ಭಿನ್ನಃ ಪೃಥಕ್ ಪೃಥಗಿವಾಶ್ರಯತೇ ವಿವರ್ತಾನ್ |
ಆವರ್ತಬುದ್ಬುದತರಂಗಮಯಾನ್ ವಿಕಾರಾನ್
ಅಂಭೋ ಯಥಾ ಸಲಿಲಮೇವ ಹಿ ತತ್ ಸಮಸ್ತಮ್ ||

[ಒಂದೇ ಶೋಕದ ಪ್ರವಾಹ ಆಶ್ರಯಗಳು ಬೇರೆ ಬೇರೆಯಾದಂತೆಲ್ಲ ಬೇರೆ ಬೇರೆ ಆಕಾರದಿಂದ ತೋರುವ ರೂಪಾಂತರಗಳನ್ನು ಪಡೆಯುತ್ತದೆ; ಎಲ್ಲವೂ ಮೂಲತಃ ನೀರೇ ಆದರೂ ಸುಳಿ, ತೆರೆ, ನೊರೆ ಮುಂತಾದ ರೂಪಾಂತರಗಳನ್ನು ಪಡೆಯುವಂತೆ!] ಎಂದಿದ್ದಾನೆ. ಈ ಸಂದರ್ಭದಲ್ಲಿ ಭವಭೂತಿಯೇ ಮಹಾವೀರಚರಿತದಲ್ಲಿ 'ಅಸಾಮಾನ್ಯ ಪಾತ್ರಗಳಲ್ಲಿರುವ ವೀರರಸ ಒಬ್ಬೊಬ್ಬರಲ್ಲೂ

ಬೇರೆಯಾಗಿ ವ್ಯಕ್ತವಾಗುತ್ತದೆ' ಎಂದು ಹೇಳಿರುವುದನ್ನು ನೆನೆಯಬೇಕು. ವ್ಯಾಖ್ಯಾಕಾರರು ಸುಖಾಂತವಾದ ನಾಟಕದಲ್ಲಿ ಆತ್ಯಂತಿಕ 'ಕರುಣರಸ' ಬಾರದ ಪ್ರಯುಕ್ತ ನಾಟಕದ ರಸ 'ಕರುಣವಿಪ್ರಲಂಭ ಶೃಂಗಾರ'ವೆನ್ನ ಬೇಕೆಂದು ಬರೆಯುವುದುಂಟು. ಈ ಚರ್ಚೆ ಕೇವಲ ಹೆಸರನ್ನು ಕುರಿತುದು. ಕವಿವಿವಕ್ಷೆ 'ಕರುಣರಸ'ವೆಂದೇ ತೋರುತ್ತದೆ.

ಭವಭೂತಿ ಆದರ್ಶಪ್ರೇಮಿಗಳ ಶೋಕಮಯವಾದ ಅಂತರಂಗದ ಜೀವನವನ್ನಿಲ್ಲಿ "ಅಪಿ ಗ್ರಾವಾ ರೋದಿತಿ, ಅಪಿ ದಲತಿ ವಜ್ರಸ್ಯ ಹೃದಯಂ" [ಕಲ್ಲೂ ಕಣ್ಣೀರಿಡುತ್ತದೆ; ವಜ್ರದ ಎದೆಯೂ ಒಡೆಯುತ್ತದೆ] ಎನ್ನುವ ಮಟ್ಟಿಗೆ ಕರುಳು ಕರಗುವಂತೆ ಚಿತ್ರಿಸಿದ್ದಾನೆ. ಸಹೃದಯರು ಇದನ್ನು ಮೆಚ್ಚ ದಿರಲಾರರು. ಪಾಶ್ಚಾತ್ಯವಿಮರ್ಶಕರಲ್ಲಿ ಕೆಲವರು ಮಾತ್ರ ಇದು ಶೋಕ ಧಾರೆಯ ಅತಿ ವಿಸ್ತರಣವೆಂದೇ ತೀರ್ಪು ಕೊಟ್ಟಿದ್ದಾರೆ. ಆದರೆ ಭಾರತೀಯ ರುಚಿಗೆ ಇದು ಅತಿವಿಸ್ತರಣವೆನಿಸದೆ ಉಚಿತ ಪರಿಪುಷ್ಟಿಯೆಂದೇ ಕಂಡಿದೆ. ಕರುಣರಸಕ್ಕೆ ಅಂಗವಾಗಿ ಭವಭೂತಿ ಆರಂಭದಲ್ಲಿ ಶೃಂಗಾರವನ್ನೂ ಗ್ರಾಮ್ಯವಲ್ಲದ ಹಾಸ್ಯರಸವನ್ನು ವಾಲ್ಮೀಕಿಯ ಆಶ್ರಮದ ವಟುಗಳ ಮಾತಿನಲ್ಲೂ, ವೀರರಸವನ್ನು ಲವ ಕುಶ ಚಂದ್ರಕೇತುಗಳ ಯುದ್ಧಪ್ರಸಂಗದಲ್ಲೂ, ಅದ್ಭುತರಸವನ್ನು ವಾಲ್ಮೀಕಿ, ಭಾಗೀರಥಿ ಭೂದೇವಿಯರ ಪಾತ್ರಗಳಲ್ಲೂ ತಂದಿದ್ದಾನೆ. ಹೀಗೆ ನಾಟಕದಲ್ಲಿ ರಸವೈವಿಧ್ಯವೂ ಇರುವುದರಿಂದ ಕರುಣ ರಸಕ್ಕೆ ಪ್ರಧಾನವಾದ ಪರಿಪುಷ್ಟಿ ಸಿಕ್ಕಿದೆಯೆನ್ನಲಡ್ಡಿಯಿಲ್ಲ. ನಾಟಕದ ಕಡೆಗೆ ವಾಲ್ಮೀಕಿಗಳು ನಡೆಸುವ ಅದ್ಭುತ ಚಮತ್ಕಾರ ಸಂಸ್ಕೃತ ನಾಟಕಲಕ್ಷಣಕ್ಕೆ ಅನುಗುಣವಾಗಿಯೇ ಇದೆ. ದೇವತೆಗಳ ಪಾತ್ರಗಳಲ್ಲಿ ಬರುವ ಪಾತಾಳ ಗಮನಾದಿ ಅದ್ಭುತಗಳನ್ನು ರಾಮಾದಿಗಳಲ್ಲಿ ಕವಿ ತೋರಿಸಿಲ್ಲ. ಹೀಗೆ ದೇವತೆಗಳೂ ಋಷಿಗಳೂ ಭಾಗವಹಿಸುವ ಈ ನಾಟಕದಲ್ಲಿಯೂ ಕೂಡ ಸಂಬಲಾರದಂತಹ ಘಟನೆಗಳನ್ನು ಮಾನವಪಾತ್ರಗಳಲ್ಲಿ ಕವಿ ತೋರಿಸಿಲ್ಲ. ಹೀಗೆ ವಾಸ್ತವಿಕತೆಗೂ ಅವಾಸ್ತವಿಕತೆಗೂ ಸಮನ್ವಯಮಾಡಿರುವ ಕವಿಯ ನಾಟಕ ತಂತ್ರ ಶ್ಲಾಘನೀಯವಾಗಿದೆ. ಪಾಶ್ಚಾತ್ಯನಾಟಕಗಳಲ್ಲಿ ಪ್ರಸಿದ್ಧವಾದ ದುರಂತ ವಸ್ತುವಿನ್ಯಾಸ ಈ ನಾಟಕದಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಪ್ರವಿಷ್ಟ ವಾಗಿದೆ. ಆದರೆ ಇದನ್ನೇ Tragedy ಅಥವಾ ದುಃಖಾಂತನಾಟಕವೆಂದು ತಿಳಿದು ಸುಖಾಂತ ಬಲವಂತಕ್ಕೆ ಬಂದುದೆನ್ನುವುದು ಯೋಗ್ಯವಿಮರ್ಶೆ ಯಲ್ಲ. ಏಕೆಂದರೆ ಮಂಗಳಾಂತವೇ ಕವಿಗೆ ನಾಂದಿಯಿಂದಲೂ ವಿವಕ್ಷಿತ ವೆಂಬುದನ್ನು ನೋಡಿದ್ದೇವೆ.

## ೬. ಭವಭೂತಿಯ ಪ್ರೇಮಮೀಮಾಂಸೆ

ಉತ್ತರರಾಮಚರಿತೆಯನ್ನು ಬರೆಯುವ ವೇಳೆಗೆ ಭವಭೂತಿಯ ಲೋಕಾನುಭವವು ಮಾಗಿ ಹಣ್ಣಾಗಿತ್ತು. ಹೊಸ ಕಥೆಯನ್ನು ರಂಗಸ್ಥಳಕ್ಕೆ ತಂದು ಹೊಸ ಸಮಸ್ಯೆಯನ್ನೂ ಹೊಸ ರಸಗಳನ್ನೂ ಹರಿಸಬೇಕೆಂಬ ಹಂಬಲ ಕಡಿಮೆಯಾಗಿತ್ತು. ಸಾಂಸಾರಿಕ ಜೀವನವನ್ನು ಕುರಿತ ನಾಟಕದಲ್ಲಿ ಅದ್ಭುತಗಳ ಬೆಲೆ ಹೆಚ್ಚಲ್ಲವೆಂದು ಮನವರಿಕೆಯಾಗಿತ್ತು. ಕೇವಲ ಘಟನೆಗಳ ಯೋಜನೆಯಿಂದಾಗಲಿ, ಕೇವಲ ವರ್ಣನೆಗಳ ಪ್ರೌಢಿಮೆಯಿಂದಾಗಲಿ ನಾಟಕಕ್ಕೆ ಶಾಶ್ವತ ಯಶಸ್ಸು ಪ್ರಾಪ್ತವಾಗಲಾರದೆಂದು ಗೊತ್ತಾಗಿತ್ತು. ಜೀವನದ ಅಭ್ಯಾಸ ನಿರಂತರವೂ ಸಮಗ್ರವೂ ಆದಮೇಲೆ ಆ ಆಳವಾದ ಅನುಭವದಿಂದ ಪ್ರೇರಿತವಾದ ನಾಟಕವೇ ಸಾರ್ವಕಾಲಿಕವಾದ ಕೀರ್ತಿಗೆ ಪಾತ್ರವಾದೀತೆಂಬ ಮರ್ಮ ಮನಸ್ಸಿಗೆ ಬಂದಿತ್ತು. ಆದ್ದರಿಂದ ಉತ್ತರರಾಮಚರಿತೆಯಲ್ಲಿ ಬರುವ ಪ್ರೇಮಮೀಮಾಂಸೆಯನ್ನು ಕುರಿತು ಇಲ್ಲಿ ಎರಡು ಮಾತು ಹೇಳಬೇಕಾಗಿದೆ.

ಉತ್ತರರಾಮಚರಿತೆ ಒಂದು ಆದರ್ಶ ಸಾಂಸಾರಿಕ ಜೀವನದ ಸುಂದರ ಪ್ರತಿಬಿಂಬ. ಪ್ರಥಮಪ್ರಣಯದ ಕಾವು ಕುಗ್ಗಿದ ಮೇಲೆ, ಅದಕ್ಕಿಂತ ಸಾವಿರಪಾಲು ಮಿಗಿಲಾದ ಎರಡು ಹೃದಯಗಳ ಅದ್ವೈತರೂಪವೇ ದಾಂಪತ್ಯ ಪ್ರೇಮ. ಈ ಆದರ್ಶಪ್ರೇಮದಲ್ಲಿ ಯಾವ ಸಂಶಯಗಳಿಗೂ ಭೇದಭಾವಗಳಿಗೂ ಎಡೆಯಿಲ್ಲ. ಪ್ರಥಮಾನುರಾಗಕ್ಕೆ ಸುಖಾಪೇಕ್ಷೆಯೇ ಮೂಲ; ವಿಯೋಗದಲ್ಲಿ ಕಾಣುವ ಪ್ರೇಮಕ್ಕೂ ಮುಂದಿನ ಸಮಾಗಮದ ಪ್ರತ್ಯಾಶೆ ನಿಮಿತ್ತ; ಆದರೆ ಆದರ್ಶದಾಂಪತ್ಯಭಾವದಲ್ಲಿ ಸ್ವಸುಖದ ಭಾವ ಸಂಪೂರ್ಣ ಲುಪ್ತವಾಗುವಂತೆ ಸುಖದ ಪ್ರತ್ಯಾಶೆಯೂ ಕ್ಷೀಣವಾಗುತ್ತದೆ. ಸೀತೆಯ ಪುನಸ್ಸಮಾಗಮದ ಹೊಲಬೇ ಇಲ್ಲದಿರುವಾಗಲೂ ರಾಮನ ಪ್ರೇಮ ಕುಂದುವುದಿಲ್ಲ. ರಾಮನ ಪರಿತ್ಯಾಗವೆಂಬ ಕರ್ಕಶವರ್ತನೆಯಿಂದಲೂ ಸೀತೆಯ ಪ್ರೇಮ ನಂದುವುದಿಲ್ಲ. ಈ ಪವಿತ್ರಪ್ರೇಮದ ಒಂದೇ ಫಲ ಪುತ್ರಸೌಖ್ಯ; ಕಾಮಸುಖವಲ್ಲ. ಋಷಿಗಳು ಹೊಗಳುವ, ದೇವತೆಗಳು ಮೆಚ್ಚುವ, ಆದರ್ಶ ಪ್ರೇಮವೆಂದರೆ ಇದೇ. ಈ ಆದರ್ಶಪ್ರೇಮವೇ ಭಾರತೀಯ ಸಂಸ್ಕೃತಿಯ ಕೆನೆಯೆನ್ನಬಹುದು. ಇದನ್ನು ನಾಟಕದ ಮೂಲಕ ಸರ್ವಜನರಿಗೂ ಮೊದಲು ಹಂಚಿಕೊಟ್ಟವನು ಭವಭೂತಿ. ಒಂದೇ ಅಮರವಾದ ಶ್ಲೋಕದಲ್ಲಿ ಭವಭೂತಿ ಆದರ್ಶಪ್ರೇಮದ ಸಾರವನ್ನು ಬಣ್ಣಿಸಿದ್ದಾನೆ—

ಅದ್ವೈತಂ ಸುಖದುಃಖಯೋರನುಗತಂ ಸರ್ವಾಸ್ವವಸ್ಥಾಸು ಯತ್
ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ ರಸಃ |
ಕಾಲೇನಾವರಣಾತ್ಯಯಾತ್ ಪರಿಣತೇ ಯತ್ ಸ್ನೇಹಸಾರೇ ಸ್ಥಿತಂ
ಭದ್ರಂ ತಸ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ ಪ್ರಾಪ್ಯತೇ ||
(ಉ. ರಾ. ಚ. ೧, ೩೯)

ಯಾವುದು ಸುಖದುಃಖಗಳೆರಡರಲ್ಲೂ ಒಂದೇ ರೂಪವಾಗಿ, ಎಲ್ಲ ಅವಸ್ಥೆಗಳಲ್ಲೂ ಒಂದೇ ಸಮನಾಗಿರುವುದೋ, ಎಲ್ಲಿ ಹೃದಯಕ್ಕೆ ಪೂರ್ಣಶಾಂತಿ ಲಭಿಸುವುದೋ, ಮತ್ತು ಸವಿ ಮುಪ್ಪಿನಿಂದಲೂ ಮಾಸದೋ, ಕಾಲಕ್ರಮೇಣ ಆವರಣಗಳೆಲ್ಲ ಸಡಿಲಿದ ಮೇಲೆ, ಯಾವುದು ಮಾಗಿ ಪ್ರೇಮಸಾರವಾಗಿ ಮಾತ್ರ ನಿಲ್ಲುವುದೋ, ಆ ಮಂಗಲಮಯವಾದ ಅದ್ವಯ ಅನುಭವ ಧನ್ಯನಾದವನಿಗೆ ಮಾತ್ರ ಎಲ್ಲಿಯಾದರೊಮ್ಮೆ ದೊರೆಯುತ್ತದೆ !

ಪುತ್ರಪ್ರೇಮದ ವಿಷಯವನ್ನೂ ಹೀಗೆಯೇ ಭವಭೂತಿ ಅಮರವಾಗಿ ಹಾಡಿದ್ದಾನೆ. ಲವಕುಶರ ಗುರುತಿನ್ನೂ ಗೊತ್ತಿಲ್ಲದಿರುವಾಗಲೇ 'ಕಣ್ಣರಿಯದಿದ್ದರೂ ಕರುಳರಿಯದೆ' ಎಂಬಂತೆ ಜನಕ, ಕೌಸಲ್ಯೆ, ಶ್ರೀರಾಮರು ಪಡೆಯುವ ಆನಂದ ವಿಸ್ತಾರವಾಗಿ ವರ್ಣಿತವಾಗಿದೆ; ಯಾರ ಎದೆಯನ್ನಾದರೂ ಸೆರೆಹಿಡಿಯುವಂತಿದೆ. ಈ ನಾಟಕ ರಸಿಕರ ಶ್ಲಾಘನೆಗೆ ಪಾತ್ರವಾಗುವುದಕ್ಕೆ ಮಕ್ಕಳ ದರ್ಶನದಿಂದ ಸಂಸಾರಿಗಳು ಪಡೆಯುವ ನಿಷ್ಕಲಂಕ ಸುಖ ವರ್ಣನೆಯೂ ಒಂದು ಕಾರಣ. ಭವಭೂತಿಯ ವಾಕ್ಯಗಳು ಎಲ್ಲ ಗೃಹಸ್ಥರ ಅನುಭವವನ್ನೂ ಅಮರವಾಗಿಸಿ ಗಾದೆಗಳಾಗಿಬಿಟ್ಟಿವೆ—

"ವ್ಯತಿಷಜತಿ ಪದಾರ್ಥಾನಾಂತರಃ ಕೋऽಪಿ ಹೇತುಃ
ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ"
(ಉ. ರಾ. ಚ. ೬, ೧೨)

'ಯಾವುದೋ ಆಂತರವಾದ ಕಾರಣ ಮಾತ್ರ ಇಬ್ಬರನ್ನು ಒಟ್ಟುಗೂಡಿಸುತ್ತದೆ. ಪ್ರೀತಿಗಳು ಬಾಹ್ಯವಾದ ಕಾರಣಗಳನ್ನು ಅವಲಂಬಿಸಿ ಬರುವುದಿಲ್ಲ.'

"ಅಂಗಾದಂಗಾತ್ ಸೃತ ಇವ ನಿಜಸ್ನೇಹಜೋ ದೇಹಸಾರಃ
ಪ್ರಾದುರ್ಭೂಯ ಸ್ಥಿತ ಇವ ಬಹಿಶ್ಚೇತನಾಧಾತುರೇಕಃ |
ಸಾಂದ್ರಾನಂದಕ್ಷುಭಿತಹೃದಯಪ್ರಸ್ರವೇನೇವ ಸೃಷ್ಟೋ
ಗಾತ್ರಂ ಶ್ಲೇಷೇ ಯದಮೃತರಸಸ್ರೋತಸಾ ಸಿಂಚತೀವ" ||
(೬, ೨೨)

“ಬಾಲಕನ ಆಲಿಂಗನದಿಂದ ನನ್ನ ಮೈಯನ್ನೆಲ್ಲ ಅಮೃತರಸಪ್ರವಾಹದಲ್ಲದ್ದಿದಂತಾಗಿದೆ. ನನ್ನ ಪ್ರೀತಿ ಶರೀರದ ಸಾರವನ್ನೆಲ್ಲ ಒಂದೊಂದು ಅಂಗದಿಂದಲೂ ಹರಿಯಿಸಿದ ಪ್ರವಾಹವೇ ಇವನಿರಬಹುದೆ! ನನ್ನ ಒಳಗಿನ ಚೇತನಾಧಾತುವೇ ಹೊರಗೆ ಮೈವೆತ್ತು ಹೀಗೆ ಬಾಲಕನ ರೂಪನ್ನು ತಳೆದಿದೆಯೋ ಎಂಬಂತಿದೆ! ಅಪಾರವಾದ ಆನಂದದಿಂದ ನನ್ನ ಹೃದಯವು ಕರಗಿ ನೀರಾಗಲು ಅದರಿಂದ ಹುಟ್ಟಿಬಂದಿರುವನೋ ಎಂಬಂತಿದೆ.”

ಭವಭೂತಿ ಜೀವನದಲ್ಲಿ ಸಂಸಾರಿಯಾಗಿ ಕಂಡ ತನ್ನ ಸುಖಾನುಭವವನ್ನೆಲ್ಲ ಇಲ್ಲಿ ಒಟ್ಟಿಯಿಳಿಸಿರುವನೆನ್ನಬಹುದು.

## ೭. ಭವಭೂತಿಯ ಶೈಲಿ

ಭಾಸನ ಪ್ರತಿಮಾನಾಟಕವನ್ನೂ ಕಾಳಿದಾಸನ ಶಾಕುಂತಲವನ್ನೂ ಓದಿದವರಿಗೆ ಭವಭೂತಿಯ ಶೈಲಿಯಲ್ಲಿ ಒಂದು ಅಂತರವೆದ್ದು ಕಾಣುತ್ತದೆ. ಅದೆಂದರೆ ವರ್ಣನೆಯ ವ್ಯಾಮೋಹ. ಒಂದು ಸಣ್ಣ ಶ್ಲೋಕದಲ್ಲಿ ಭಾಸನು ಹೇಳಿ ಮುಗಿಸುವುದನ್ನೇ ಭವಭೂತಿ ನಾಲ್ಕಾರು ಉದ್ದುದ್ದ ವೃತ್ತಗಳಲ್ಲಿ ಮತ್ತೆ ಮತ್ತೆ ವರ್ಣಿಸುತ್ತಾನೆ, ಕಾಳಿದಾಸನು ಒಂದೇ ಮಾತಿನಲ್ಲಿ ಸೂಚಿಸುವುದನ್ನು ಭವಭೂತಿ ಒಂದೆರಡು ಪುಟಗಳಲ್ಲಿ ವಿಸ್ತರಿಸುವ ಪ್ರವೃತ್ತಿಯುವನೆಂದು ವಿಮರ್ಶಕರು ಹೇಳುವುದುಂಟು, ಆದರೆ ಇದು ಅಕ್ಷರಶಃ ನಿಜವಲ್ಲ. ಭವಭೂತಿಯಲ್ಲಿಯೂ ಅಪಾರವಾದ ವ್ಯಂಗ್ಯವೈಭವವುಂಟೆಂಬುದನ್ನು ನೋಡಿದ್ದೇವೆ. ಭವಭೂತಿಗೆ ಪ್ರಕೃತಿವರ್ಣನೆಯ ಪ್ರಸಂಗಬಂದಾಗ ಅವನು ಬಳಸುವ ಶೈಲಿ ದೀಪ್ತಿಮಯುವಾದುದು; ಓಜಸ್ವಿಯಾದುದು. ಸ್ವಭಾವೋಕ್ತಿಯಲ್ಲಿ ಸೌಂದರ್ಯ ಬರಲು ಅವನು ಸೂಕ್ಷ್ಮಾರ್ಥಗಳನ್ನೆಲ್ಲ ಸಂಗ್ರಹಿಸುವುದರ ಜತೆಗೆ ದೀರ್ಘಸಮಾಸಗಳನ್ನೂ 'ಕಿವಿಯಂ ಜಕ್ಕುಲಿಪ' ವರ್ಣಗಣಗಳನ್ನೂ ಆರಿಸಿಕೊಂಡು ಗೌಡೀ ರೀತಿಯಲ್ಲಿ ಬರೆಯುತ್ತಾನೆ. ಹೆಗ್ಗಾಡಿನ ಕ್ರೂರಜಂತುಗಳ, ಪರ್ವತಪ್ರಪಾತಗಳ, ವರ್ಣನೆಯಲ್ಲಿ ಭವಭೂತಿಯ ಈ ಚಿತ್ರವೈಚಿತ್ರ್ಯದ ಶೈಲಿಯನ್ನು ನೋಡಬಹುದು. ಹಾಗೆಯೇ ನಿಸರ್ಗದ ಪ್ರಸನ್ನಭಾವವನ್ನು ವರ್ಣಿಸುವಾಗಲೂ ತದನುಗುಣವಾದ ಸುಕುಮಾರವರ್ಣಗಳನ್ನು ಮಧುರವಾಗಿ ಭವಭೂತಿ ಬಳಸಬಲ್ಲನು. ಈ ಶಕ್ತಿ ಕಾಳಿದಾಸನಲ್ಲಿಯೂ ಈ ಪ್ರಮಾಣದಲ್ಲಿಲ್ಲವೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಆದರೆ ಮೊದಲೇ ನಾವು ನೋಡಿದಂತೆ ಭವಭೂತಿ ಈ ನಾಟಕದಲ್ಲಿ ಮುಖ್ಯವಾಗಿ ಮನೋರಾಜ್ಯದ ಚಕ್ರವರ್ತಿ. ಅತ್ಯಂತ ಹೃದಯವಿದ್ರಾವಕವಾಗಿ ಕರುಣರಸದ ಅಭಿವ್ಯಕ್ತಿಮಾಡುವಾಗ

ಭವಭೂತಿಯು ಶೈಲಿ ಆಡುಮಾತಿನ ಸರಳತೆಯ ಪರಾಕಾಷ್ಠೆಯನ್ನೇ ಮುಟ್ಟಿ ಪರಿಣಾಮಕಾರಿಯಾಗುತ್ತದೆ. ಭವಭೂತಿಗೆ ಅನೇಕ ಅಲಂಕಾರಗಳ ಪರಿಚಯವುಂಟು. ಅವನ ಅರ್ಥಾಂತರನ್ಯಾಸಗಳೂ, ದೃಷ್ಟಾಂತಗಳೂ, ಉಪಮೆಗಳೂ ತಮ್ಮ ಸಾರ್ವತ್ರಿಕ ಸೌಂದರ್ಯದ ಮೂಲಕ ಸಂಸ್ಕೃತದಲ್ಲಿ ಗಾದೆ ಮಾತುಗಳಾಗಿಬಿಟ್ಟಿವೆ. ಅನೇಕ ಪದಪ್ರಯೋಗಗಳಲ್ಲಿ ವಾಲ್ಮೀಕಿಯ ಹಾಗು ಕಾಳಿದಾಸರ ಅಜ್ಞಾತಪ್ರಭಾವವಿರುವುದನ್ನು ಇಲ್ಲಿ ಕಾಣಬಹುದು. ಹೀಗೆ ಭವಭೂತಿಯ ಶೈಲಿ ಪ್ರಸಂಗೋಚಿತವಾಗಿ ಮಕ್ಕಳ ಮುದ್ದು ಮಾತಾಗಬಲ್ಲುದು; ನಲ್ಲೆಯ ಲಲ್ಲೆಯಾಗಬಲ್ಲುದು; ಗೋಳಿಡುವ ಹೃದಯದ ಕ್ರಂದನವೂ ಆಗಬಲ್ಲುದು; ಕೋಗಿಲೆಯ ಕೂಜನವಾಗಬಲ್ಲುದು; ದುಂಬಿಯ ಗುಂಜನವಾಗಬಲ್ಲುದು; ಹುಲಿಸಿಂಹಗಳ ಗರ್ಜನವೂ ಆಗಬಲ್ಲುದು. ಛಂದಸ್ಸುಗಳ ಆಯ್ಕೆಯಲ್ಲಿಯೂ ಅಷ್ಟೆ; ಭಾಸ ಕಾಳಿದಾಸರಿಗಿಂತಲೂ ಮಿಗಿಲಾದ ವೈವಿಧ್ಯವನ್ನೂ ಔಚಿತ್ಯವನ್ನೂ ಭವಭೂತಿ ಪ್ರದರ್ಶಿಸಿದ್ದಾನೆ.

## ೮. ಪೂರ್ವಕವಿಪ್ರಶಸ್ತಿಗಳು

ಭವಭೂತಿಯನ್ನು ಬಾಯಾರೆ ಕೊಂಡಾಡಿರುವ ಅನೇಕ ಪೂರ್ವಕವಿಗಳಿದ್ದಾರೆ. ಕೆಲವರ ನುಡಿಗಳನ್ನಿಲ್ಲಿ ಉದ್ಧರಿಸಲಾಗಿದೆ:—

೧. ಸ್ಪಷ್ಟಭಾವರಸಾ ಚಿತ್ರೈಃ ಪಾದನ್ಯಾಸೈಃ ಪ್ರವರ್ತಿತಾ |
ನಾಟಕೇಷು ನಟಸ್ತ್ರೀವ ಭಾರತೀ ಭವಭೂತಿನಾ ||

—ಧನಪಾಲ (ತಿಲಕಮಂಜರೀ, I, ೩೦)

ಭವಭೂತಿ ವಾಣಿಯನ್ನು ನಟಿಯಂತೆ ನಾಟಕದಲ್ಲಿ ಕುಣಿಸಿದ್ದಾನೆ—ಆಕೆಯ ಅಭಿನಯದಲ್ಲಿ ರಸಭಾವಗಳು ಸ್ಪಷ್ಟವಾಗಿರುವಂತೆಯೇ ಪಾದನ್ಯಾಸಗಳು ಚಿತ್ರವಾಗಿಯೂ ಇರುತ್ತವೆ.

೨. ಭವಭೂತೇಃ ಶಿಖರಿಣೀ ನಿರರ್ಗಲತರಂಗಿಣೀ |
ರುಚಿರಾ ಘನಸಂದರ್ಭೇ ಯಾ ಮಯೂರೀವ ನೃತ್ಯತಿ ||

—ಕ್ಷೇಮೇಂದ್ರ (ಸುವೃತ್ತತಿಲಕ, III, ೩೩)

ಭವಭೂತಿಯ ಶಿಖರಿಣೀವೃತ್ತ ನಿರರ್ಗಲವಾಗಿ ಹರಿಯುವ ತರಂಗಿಣಿಯೇ ಸರಿ. ಮನೋಹರಳಾದ ಮಯೂರಿಯಂತೆ ಘನಸಂದರ್ಭದಲ್ಲಿ (ಮೋಡದ ಕಾಲ ಮತ್ತು ಗಂಭೀರ ಕಾವ್ಯ) ಕುಣಿಯುತ್ತಾ ಇರುತ್ತದೆ.

೩. ಭವಭೂತೇಃ ಸಂಬಂಧಾದ್ ಭೂಧರಭೂರೇವ ಭಾರತೀ ಭಾತಿ |
ಏತತ್ಕೃತಕಾರುಣ್ಯೇ ಕಿಮನ್ಯಥಾ ರೋದಿತಿ ಗ್ರಾವಾ ||
ಗೋವರ್ಧನ (ಆರ್ಯಾಸಪ್ತಶತೀ, I. ೩೬)

ಪಾರ್ವತಿ ಚೆನ್ನಾಗಿ ಕಾಣುವುದು ಶಿವನ ವಿಭೂತಿಯ ಸ್ಪರ್ಶವಿದ್ದಾಗ ಮಾತ್ರ; ಸರಸ್ವತಿ ವಿರಾಜಿಸುವುದೂ ಭವಭೂತಿಯ ಸ್ಪರ್ಶದಿಂದಲೇ. ಆ ಸ್ಪರ್ಶದಿಂದ ಸರಸ್ವತಿಯೇ ಪರ್ವತನಂದಿನಿಯಾಗಿಬಿಡುತ್ತಾಳೆ. ಇಲ್ಲದೆ ಹೋಗಿದ್ದರೆ ಅವನ ಕರುಣರಸಕ್ಕೆ ಬೆಟ್ಟದ ಕಲ್ಲುಗಳೆಲ್ಲ ಏಕೆ ಅಳುತ್ತಿದ್ದುವು?

೪. ಸುಕವಿದ್ವಿತಯಂ ಮನ್ಯೇ ನಿಖಿಲೇಽಪಿ ಮಹೀತಲೇ |
ಭವಭೂತಿಃ ಶುಕಶ್ಚಾಯಂ ವಾಲ್ಮೀಕಿಸ್ತ್ರಿತಯೋಽನಯೋಃ ||
—ಭೋಜಪ್ರಬಂಧ

ಭವಭೂತಿ, (ಈ) ಶುಕ, ವಾಲ್ಮೀಕಿ—ಈ ಮೂವರಲ್ಲಿ ಮೊದಲ ಇಬ್ಬರನ್ನು ಮಾತ್ರ ವಿಶ್ವಕವಿಗಳೆಂದು ನಾನು ತಿಳಿಯುತ್ತೇನೆ.

೫. ಮಾನ್ಯೋ ಜಗತ್ಯಾಂ ಭವಭೂತಿರಾರ್ಯಃ
ಸಾರಸ್ವತೇ ವರ್ತ್ಮನಿ ಸಾರ್ಥವಾಹಃ |
ವಾಚಂ ಪತಾಕಾಮಿವ ಯಸ್ಯ ದೃಷ್ಟ್ವಾ
ಜನಃ ಕವೀನಾಮನುಪೃಷ್ಠಮೇತಿ ||
—ಉದಯಸುಂದರೀ ಚಂಪೂ

ಸಾರಸ್ವತಮಾರ್ಗದಲ್ಲಿ ಮುಖಂಡನಾದ ಭವಭೂತಿಯೇ ಪೂಜ್ಯಸ್ಥಾನಕ್ಕೆ ಯೋಗ್ಯ. ಆತನ ಪತಾಕೆ (ಪತಾಕಾಸ್ಥಾನವೂ ಸಹ) ಯಂತಿರುವ ಮಾತನ್ನು ನೋಡಿ ಜನರು ಹಿಂದಿನಿಂದ ಕವಿಗಳೆನಿಸುತ್ತಾರೆ.

೬. ಸುಬಂಧೌ ಭಕ್ತಿರ್ನಃ ಕ ಇಹ ರಘುಕಾರೇ ನ ರಮತೇ
ಧೃತಿರ್ದಾಕ್ಷೀಪುತ್ರೇ ಹರತಿ ಹರಿಚಂದ್ರೋಽಪಿ ಹೃದಯಮ್ |
ವಿಶುದ್ಧೋಕ್ತಿಃ ಶೂರಃ ಪ್ರಕೃತಿಮಧುರಾ ಭಾರವಿಗಿರಃ
ತಥಾಪ್ಯಂತರ್ಮೋದಂ ಕಮಪಿ ಭವಭೂತಿರ್ವಿತನುತೇ ||
—ಸದುಕ್ತಿಕರ್ಣಾಮೃತ

ಸುಬಂಧುವಿನಲ್ಲಿ ನಮಗೆ ಭಕ್ತಿಯಿದೆ. ಕಾಳಿದಾಸನನ್ನು ಮೆಚ್ಚದವರಾರು? ಪಾಣಿನಿಯಲ್ಲಿ ಸತ್ತ್ವವಿದೆ. ಹರಿಚಂದ್ರನೂ ಆಕರ್ಷಕನೇ ನಿಜ. ಶೂರನಲ್ಲಿ

ಉಕ್ತಿಶುದ್ಧಿಯುಂಟು. ಭಾರವಿಯ ಮಾತುಗಳಂತೂ ಪ್ರಕೃತಿಮಧುರ. ಇಷ್ಟೆಲ್ಲ ಆದರೂ ಭವಭೂತಿ ಕೊಡುವ ಅಂತರ್ವೋದ ಮಾತ್ರ ಅದ್ವಿತೀಯ.

ಭವಭೂತಿಯ ಸಮಾಪ್ತಿ ವಾಕ್ಯವನ್ನೇ ಪುನುರುಚ್ಚರಿಸಿ ಈ ಪೀಠಿಕೆಯನ್ನೀಗ ಮುಗಿಸುತ್ತೇವೆ:—

> ಪಾಪಲೇಪವ ಕಳೆದು ಶುಭಗಳನೀವ ಪಾವನ ಕಥೆಯಿದು
> ಮಂಗಳಂ ಸುಮನೋಹರಂ ಭೂಮಾತೆ ಭಾಗೀರಥಿಗಳೊಲ್ ;
> ಅಭಿನಯೋಚಿತ ರೂಪನಾಂತಿದನಿಂದು ಸವಿಯಲಿ ವಿಬುಧರು
> ವಿದಿತ ಶಬ್ದಬ್ರಹ್ಮ, ಪರಿಣತಪ್ರಜ್ಞ, ಕವಿವರ ವಾಣಿಯಂ.

---

# ಪಾತ್ರವರ್ಗ

## ಪುರುಷರು

ರಾಮ—ನಾಯಕ, ಅಯೋಧ್ಯೆಯ ಮಹಾರಾಜ.

ಲಕ್ಷ್ಮಣ—ರಾಮನ ತಮ್ಮ.

ಜನಕ—ವಿದೇಹಾಧಿಪತಿ, ಸೀತೆಯ ತಂದೆ.

ಲವ<br>ಕುಶ } ರಾಮನ ಅವಳಿ ಮಕ್ಕಳು.

ಚಂದ್ರಕೇತು—ಲಕ್ಷ್ಮಣನ ಮಗ, ಯಜ್ಞಾಶ್ವದ ರಕ್ಷೆಗಾಗಿ ಬಂದಿರುವ ಸೇನೆಯ ಅಧಿಪತಿ.

ವಾಲ್ಮೀಕಿ—ರಾಮಾಯಣದ ಕವಿ, ಲವ-ಕುಶರ ಸಾಕುತಂದೆ.

ದುರ್ಮುಖ—ರಾಮನ ಗೂಢಚಾರ.

ಶಂಬೂಕ—ಶೂದ್ರತಪಸ್ವಿ; ರಾಮನಿಂದ ಹತನಾಗಿ ದಿವ್ಯತ್ವವನ್ನು ಪಡೆಯುವವನು.

ಸೌಧಾತಕಿ<br>ದಾಂಡಾಯನ<br>ವಟುಗಳು } ವಾಲ್ಮೀಕಿಯ ತಪೋವನದಲ್ಲಿ ಕಲಿಯುತ್ತಿರುವ ವಟುಗಳು.

ಅಷ್ಟಾವಕ್ರ—ಒಬ್ಬ ಋಷಿ, ಋಷ್ಯಶೃಂಗನ ಆಶ್ರಮದಿಂದ ವಸಿಷ್ಠರ ಸಂದೇಶವನ್ನು ರಾಮನಿಗೆ ತರುವವನು.

ಸುಮಂತ್ರ—ಚಂದ್ರಕೇತುವಿಗೆ ಸಾರಥಿ.

ವಿದ್ಯಾಧರ—ಖೇಚರನಾದ ಈತನು ವಿಮಾನದಲ್ಲಿ ಕುಳಿತು ತನ್ನ ಪ್ರೇಯಸಿಗೆ ಲವ-ಚಂದ್ರಕೇತುಗಳ ಯುದ್ಧವನ್ನು ವಿವರಿಸುವವನು.

ಪುರುಷ—ಚಂದ್ರಕೇತುವಿನ ಸೈನ್ಯದಲ್ಲಿ ಒಬ್ಬ.

ಗೃಷ್ಟಿ (ಕಂಚುಕಿ)—ರಾಮನ ಅಂತಃಪುರದ ಅಧಿಕಾರಿ.

ಸೂತ್ರಧಾರ—ನಾಟಕದ ಪ್ರಸ್ತಾವನೆಯ ಪಾತ್ರ.

ನಟ—ಸೂತ್ರಧಾರನ ಗೆಳೆಯ.

## ಸ್ತ್ರೀಯರು

ಸೀತೆ—ನಾಯಿಕೆ, ಜನಕನ ಮಗಳು, ರಾಮನ ಪತ್ನಿ.

ವಾಸಂತಿ—ಜನಸ್ಥಾನದ ವನದೇವತೆ. ಸೀತಾರಾಮರ ವನವಾಸ ಕಾಲದಲ್ಲಿ ಅವರ ಪ್ರಿಯಸಖಿಯಾಗಿದ್ದವಳು.

ಆತ್ರೇಯಿ—ವಿದ್ಯಾರ್ಥಿನಿ. ವಾಲ್ಮೀಕಿಯ ಗುರುಕುಲದಿಂದ ಅಗಸ್ತ್ಯರ ಗುರುಕುಲಕ್ಕೆ ವಲಸೆ ಹೋಗುತ್ತಿರುವವಳು.

ಕೌಸಲ್ಯೆ—ದಶರಥನ ಪತ್ನಿ, ರಾಮನ ತಾಯಿ.

ಮುರಲೆ, ತಮಸೆ—ಎರಡು ನದೀದೇವತೆಗಳು.

ಅರುಂಧತಿ—ವಸಿಷ್ಠನ ಪತ್ನಿ.

ವಿದ್ಯಾಧರಿ—ವಿದ್ಯಾಧರನ ಪ್ರಿಯತಮೆ. ಲವಕುಶರ ಯುದ್ಧವನ್ನು ಆಕಾಶದಿಂದ ನೋಡಿ ಬೆರಗಾಗುವವಳು.

ಪ್ರತೀಹಾರಿ—ರಾಮನ ದ್ವಾರಪಾಲಕೆ.

## ನಾಟಕದಲ್ಲಿ ಸೂಚಿತರಾಗುವ ಇತರರು

ವಸಿಷ್ಠ, ಋಷ್ಯಶೃಂಗ, ಶಾಂತಾ ಊರ್ಮಿಳಾ, ಮಾಂಡವೀ, ಶ್ರುತಕೀರ್ತಿ, ಕೈಕೇಯಿ, ಲವಣ, ಶತ್ರುಘ್ನ, ವಿಶ್ವಾಮಿತ್ರ, ಪರಶುರಾಮ, ಇತ್ಯಾದಿ.

---

# ಕನ್ನಡ ಉತ್ತರ ರಾಮಚರಿತೆ

---

## ಮೊದಲನೆಯ ಅಂಕ

(ನಾಂದಿ)

ವಂದಿಸಿ ಪೂರ್ವಕವೀಶ್ವರ
ವೃಂದಮನೊರ್ಮೊದಲೊಳಂತೆ ವಾಗ್ರೂಪಿಣಿಯಂ
ಕುಂದದೆ ನಿಂದಾತ್ಮಕಲಾ
ಸುಂದರಿಯಂ ನಮಿಪೆನಮೃತೆಯಂ ಸರಸತಿಯಂ. ೧

(ನಾಂದಿಯ ನಂತರ)

ಸೂತ್ರಧಾರ—ಇನ್ನು ಬೆಳೆಸುವುದು ಬೇಡ! ಭಗವಾನ್ ಕಾಲಪ್ರಿಯಾನಾಥನ ಯಾತ್ರಾಮಹೋತ್ಸವದ ಈ ಸುದಿನ ನೆರೆದಿರುವ ಮಹಾಜನರಿಗೆ ನನ್ನ ವಿಜ್ಞಾಪನೆ:—ಪೂಜ್ಯರು ಪರಾಂಬರಿಸಬೇಕು: ಕಾಶ್ಯಪಗೋತ್ರದಲ್ಲಿ ಜನಿಸಿ, ಶ್ರೀಕಂಠನೆಂಬ ಬಿರುದನ್ನು ಪಡೆದು, ವ್ಯಾಕರಣ, ಮೀಮಾಂಸಾ, ಮತ್ತು ತರ್ಕಶಾಸ್ತ್ರಗಳಲ್ಲಿ ಪ್ರವೀಣನಾಗಿರುವ ಜತುಕರ್ಣೀಕುಮಾರ ಪೂಜ್ಯ ಭವಭೂತಿಯಿರುವನಷ್ಟೆ—

ಆವನನೀ ವಾಗ್ದೇವಿಯೆ
ಸೇವಿಸುವಳ್ ವಶ್ಯೆಯಂತೆ ತಾನಾ ಬ್ರಹ್ಮಂ
ವ್ಯಾವರ್ಣಿಸಿದೀ ಕೃತಿಯಂ
ನಾವಾಡುವೆವಿಂದು ರಾಮನುತ್ತರಕಥೆಯಂ. ೨

ಕಾರ್ಯನಿಮಿತ್ತದಿಂದ ನಾನೀಗ ಅಯೋಧ್ಯಾಪಟ್ಟಣದ ನಿವಾಸಿ ಮತ್ತು ಶ್ರೀರಾಮನ ಕಾಲದವನು. (ಸುತ್ತಲೂ ನೋಡಿ) ಪರಿಚಾರಕರೇ, ಇದೇನು? ಪೌಲಸ್ತ್ಯಕುಲಧೂಮಕೇತುವೆಂದು ಕೊಂಡಾಡಿಸಿಕೊಳ್ಳುತ್ತಿರುವ ರಾಮನಿಗೆ ಮಹಾಪಟ್ಟಾಭಿಷೇಕವೆಂಬ ಈ ಮಂಗಲಪ್ರಸಂಗದಲ್ಲಿ ಹಗಲೂ ರಾತ್ರಿಯೂ ಎಡೆಬಿಡದೆ ಮಂಗಳವಾದ್ಯಗಳು ಮೊಳಗಬೇಕಾದಾಗ, ಚಾರಚಾರಣರೆಲ್ಲರೂ ನಗರಚತ್ವರಗಳಲ್ಲಿ ತೆಪ್ಪನಿರುವುದೇನು?

(ನಟನ ಪ್ರವೇಶ)

ನಟ—ಭಾವ, ಇಷ್ಟು ದಿನಗಳೂ ಮಹಾವಿಜೃಂಭಣೆಯಿಂದಲೇ ಉತ್ಸವ ಜರುಗಿತು. ಎಲ್ಲವೂ ಅಭ್ಯಾಗತರಾದ ಮಹಾತ್ಮರ ಸಂತೃಪ್ತಿಗಾಗಿ ನಡೆದಿತ್ತು. ಲಂಕಾಯುದ್ಧದಲ್ಲಿ ಮಿತ್ರರಾದ ವಾನರರಾಕ್ಷಸವೀರರು, ಮತ್ತು ಅಭಿನಂದಿಸಲೆಂದು ಬಂದ ಬ್ರಹ್ಮರ್ಷಿಗಳು, ರಾಜರ್ಷಿಗಳು,—ಈ ಎಲ್ಲ ಅಭ್ಯಾಗತರನ್ನೂ ಮಹಾರಾಜನಾಗಲೇ ಸತ್ಕರಿಸಿ ಅವರವರ ಮನೆಗಳಿಗೆ ಕಳುಹಿಸಿಕೊಟ್ಟಾಯಿತು.

ಸೂತ್ರಧಾರ—ಓಹೊ, ಸರಿಯಾದ ನಿಮಿತ್ತ.

ನಟ—ಮತ್ತೊ ಒಂದಿದೆ—

ಯಜ್ಞಂಗೈಯುವ ಅಳಿಯನ ಆಶ್ರಮ-
  ಕೈದಿದರೆಲ್ಲಾ ರಾಣಿಯರು,
  ಸಲೆ ಶ್ರೀರಾಮನ ಮಾತೆಯರು;
ಮುನಿಪ ವಸಿಷ್ಠನೆ ಸಂಗಡ ಬರಲು,
ದೇವಿಯರುಂಧತಿ ಮುಂಗಡೆಯಿರಲು. ೩

ಸೂತ್ರಧಾರ—ನಾನು ಪರಸ್ಥಳದವನಾದ್ದರಿಂದ ಕೇಳಬೇಕಾಯಿತು; ಅಳಿಯ ನೆಂದರೆ ಯಾರು ?

ನಟ—

ಶಾಂತೆಯೆಂಬ ಕನ್ನೆ ದಶರಥಂಗೆ ಪುಟ್ಟಲವಳನು
ರೋಮಪಾದಗಂದು ಸಾಕುಮಗಳೆನಲ್ಕೆ ಕೊಟ್ಟನು. ೪

ಆಕೆಯನ್ನು ವಿಭಾಂಡಕನ ಮಗ ಋಷ್ಯಶೃಂಗನು ಮದುವೆಯಾದನು. ಆತನೀಗ ಹನ್ನೆರಡು ವರ್ಷ ಹಿಡಿಯುವ ಯಾಗವನ್ನಾರಂಭಿಸಿದ್ದಾನೆ. ಅವನ ಬಲವಂತಕ್ಕೆ ಕಟ್ಟುಬಿದ್ದವರಾದ ಗುರುಜನರು, ಜಾನಕಿ ತುಂಬಿದ ಗರ್ಭಿಣಿಯಾಗಿದ್ದರೂ ಆಕೆಯನ್ನು ಬಿಟ್ಟು ಅಲ್ಲಿಗೆ ತೆರಳಿದ್ದಾರೆ.

ಸೂತ್ರಧಾರ—ನಮಗೆ ಅದನ್ನು ಕಟ್ಟಿಕೊಂಡೇನು? ನಮ್ಮ ಕುಲಾಗತವಾದ ವೃತ್ತಿಗನುಗುಣವಾಗಿ ರಾಜದ್ವಾರದಲ್ಲಿ ಕಾಯೋಣ, ಬಾ.

ನಟ—ಹಾಗಾದರೆ ಪರಿಶುದ್ಧವಾಗಿರುವ ರಾಜಸ್ತುತಿಯ ಕ್ರಮವನ್ನು ಭಾವನೇ ನನಗೆ ಕಲಿಸಿಕೊಡಬೇಕು.

ಸೂತ್ರಧಾರ—ಅಯ್ಯಾ—

ಎಂತುಂ ವ್ಯವಹೃತಿಗೈಯಲ್ ಬರ್ಕುಂ;
ಪಳಿಗೆಡೆಯಿಲ್ಲದುದಾವುದುಮೊಳವೇ ?
ಪೆಂಡಿರ ನಡತೆಯುಸಂತೆಯೆ ನುಡಿಗಳ
ಶುದ್ಧಿಯನಳಿವೆಡೆ ಜನ ದುರ್ಜನವೇ. ೫

ನಟ—ಅತಿ ದುರ್ಜನವೆನ್ನಬೇಕು ; ಏಕೆಂದರೆ—

ದೇವಿಯೊಳಾ ವೈದೇಹಿಯೊಳಂ ಮೇಣ್
ಜನರಪವಾದವನಾಡುವರು ;
ರಕ್ಕಸವೀಡಿನೊಳಿರ್ಕೆಯೆ ಮೂಲವು,
ಅಗ್ನಿವಿಶುದ್ಧಿಯ ಶಂಕಿಪರು. ೬

ಸೂತ್ರಧಾರ—ಈ ವದಂತಿ ಮಹಾರಾಜನಿಗೂ ಮುಟ್ಟಿದರೆ ಅನರ್ಥವಾದೀತು.

ನಟ—ಏನೇ ಆಗಲಿ, ಋಷಿಗಳೂ ದೇವತೆಗಳೂ ಶುಭವನ್ನೇ ಮಾಡುವರು. (ಅತ್ತಿತ್ತ ಸುಳಿದು) ಪರಿಜನರೆ, ಈಗ ಮಹಾರಾಜನೆಲ್ಲಿ? (ಆಲಿಸಿ) ಅವರು ಹೇಳುತ್ತಾರೆ—

ನೇಹದಿಂದಾದರಿಸಲ್ಕೆತಂದು ಸಂಭ್ರಮದೊ
ಳಿನಿತೊಂದು ದಿನಗಳೆದ ಜನಕನಿಂದು
ಮರಳಿದನು ತನ್ನೂರ್ಗೆಯೆಂದು ದುಗುಡಂಗೊಂಡ
ದೇವಿಯನು ತಾನೆ ಸಂತೈಸಲೆಂದು,
ಉಳಿದು ಧರ್ಮಾಸನವನೀಗಳಂತಃಪುರಕೆ
ನರಪತಿಯು ಸಾರ್ದಪನು ಬೇಗ ಬಂದು. ೭

(ಇಬ್ಬರೂ ನಿಷ್ಕ್ರಮಿಸುವರು)

## ಇದು ಪ್ರಸ್ತಾವನೆ

(ಪ್ರವೇಶ—ಆಸನದಲ್ಲಿ ಕುಳಿತ ರಾಮ ಮತ್ತು ಸೀತೆ)

ರಾಮ—ದೇವಿ, ವೈದೇಹಿ, ಸಂತೈಸಿಕೊ. ಆ ಗುರುಜನರಿಗೂ ನಮ್ಮನ್ನು ಬಿಟ್ಟಿರುವುದು ಕಷ್ಟವೇ.

ಆದೊಡನುಷ್ಠಾನದ ವಿಧಿನಿಯಮವು
ಬರಸೆಳೆವುದು ಸ್ವಾತಂತ್ರ್ಯವನು

ಅಗ್ನ್ಯಾರಾಧಕರಾ ಗಾರ್ಹಸ್ಥ್ಯಕೆ
ಲೋಪಗಳೀವುವು ಬನ್ನವನು. ೮

ಸೀತೆ—ಬಲ್ಲೆ, ಆರ್ಯಪುತ್ರನೆ, ಬಲ್ಲೆ. ಆದರೂ, ಬಂಧುಜನವಿಯೋಗಗಳೇ ಸಂತಾಪಕರ.

ರಾಮ—ನಿಜವೇ. ಜೀವನದ ಈ ಅಂಶಗಳು ಹೃದಯದ ಮರ್ಮಗಳನ್ನೇ ಕತ್ತರಿಸುತ್ತವೆ. ಇವುಗಳಿಂದ ಹೇಸಿ, ಆಸೆಗಳನ್ನೆಲ್ಲ ಪರಿತ್ಯಜಿಸಿ, ಜ್ಞಾನಿಗಳು ಕಾಡಿನಲ್ಲಿ ವಿಶ್ರಾಂತಿ ಪಡೆಯುತ್ತಾರೆ.

(ಪ್ರವೇಶ)

ಕಂಚುಕಿ—ರಾಮಭದ್ರ . . . (ಅರ್ಧೋಕ್ತಿಯಲ್ಲೇ ಅಂಜಿಕೆಯಿಂದ) ಮಹಾರಾಜ!

ರಾಮ (ಮುಗುಳ್ನಗೆಯಿಂದ)—ಆರ್ಯ, ತಂದೆಯವರ ಪರಿಜನರ ಬಾಯಲ್ಲಿ 'ರಾಮಭದ್ರ' ಎಂದು ಬರುವುದೇ ನನಗೆ ಹಿತವಾದ ಉಪಚಾರ. ನಿನಗೆ ರೂಢಿಯಾಗಿರುವಂತೆ ಮಾತನಾಡು.

ಕಂಚುಕಿ—ದೇವ, ಋಷ್ಯಶೃಂಗರ ಆಶ್ರಮದಿಂದ ಅಷ್ಟಾವಕ್ರನು ಬಂದಿರುವನು.

ಸೀತೆ—ಆರ್ಯ, ಹಾಗಾದರೆ, ತಡವೇಕೆ?

ರಾಮ—ಕೂಡಲೆ ಒಳಗೆ ಕಳುಹಿಸು.

(ನಿಷ್ಕ್ರಮ-ಕಂಚುಕಿ)

(ಪ್ರವೇಶ)

ಅಷ್ಟಾವಕ್ರ—ನಿಮಗೆ ಶುಭವಾಗಲಿ!

ರಾಮ—ಭಗವನ್, ನಮಸ್ಕರಿಸುತ್ತೇನೆ. ಇತ್ತ ಕುಳ್ಳಿರಬೇಕು.

ಸೀತೆ—ಭಗವನ್, ವಂದಿಸುತ್ತೇನೆ. ಅಳಿಯನೊಡನಿರುವ ಗುರುಜನರೂ ಆರ್ಯೆ ಶಾಂತೆಯೂ ಕುಶಲರಾಗಿರುವರಷ್ಟೆ?

ರಾಮ—ಸೋಮಪೀಥಿಗಳಾದ ನಮ್ಮ ಭಾವ ಋಷ್ಯಶೃಂಗರಿಗೂ ಅಕ್ಕ ಶಾಂತಾದೇವಿಯವರಿಗೂ ನಿರ್ವಿಘ್ನವಷ್ಟೆ?

ಸೀತೆ—ನಮ್ಮನ್ನೂ ನೆನೆಯುವರೇನು?

ಅಷ್ಟಾವಕ್ರ (ಕುಳಿತು)—ಖಂಡಿತವಾಗಿಯೂ. ದೇವಿ, ಕುಲಗುರುಗಳಾದ ಭಗವಾನ್ ವಸಿಷ್ಠರು ನಿನಗೆ ಈ ಸಂದೇಶವನ್ನು ಕಳುಹಿಸಿದ್ದಾರೆ—

ದೇವಿ ವಿಶ್ವಂಭರೆಯೆ ನಿನ್ನ ಪೆತ್ತಳು ವತ್ಸೆ,
ಬ್ರಹ್ಮನಿಗೆ ಸಮನಪ್ಪ ಜನಕನೇ ತಂದೆ;
ಮಗಳೆ, ನೀಂ ಸೊಸೆಯಾದೆ ನೆಗಳ್ದ ಪಾರ್ಥಿವಕುಲಕೆ
ಆವುದಕ ಮೊದಲ ಗುರು ರವಿಯೀಗ ನಾವುಂ ೯

ಎಂದಮೇಲೆ ನಾವು ಹಾರೈಸತಕ್ಕುದೇನಿದೆ? ಇಷ್ಟೇ ಸರಿ—ವೀರಪುತ್ರರನ್ನು ಹಡೆಯಮ್ಮ !

ರಾಮ—ನಿಜವಾಗಿಯೂ ಇದು ನಮ್ಮ ಮೇಲೆ ಅವರ ಅನುಗ್ರಹ.

ಪೊಡವಿಯೊಳೀಗಳ್ ಪುರುಷರ
ನುಡಿಗಳೊಡಂಬಡುವವರ್ಥವೆಂತಂತೆ ದಲಾ-
ಡೊಡೆ ಮುನ್ನಿನ ಋಷಿವರ್ಯರ
ನುಡಿಯಂ ಬಳಿವಿಡಿದು ಬರ್ಪುದರ್ಥಮೆ ಬೇಗಂ ೧೦

ಅಷ್ಟಾವಕ್ರ—ಭಗವತಿ ಅರುಂಧತಿಯೂ ಶಾಂತಾದೇವಿಯೂ ಮತ್ತೆ ಮತ್ತೆ ಹೇಳಿ ಕಳುಹಿಸಿರುವ ಸಂದೇಶವಿದು—'ಗರ್ಭಿಣಿಯಾದ ಈಕೆಯ ಬಯಕೆಯೇನಿದ್ದರೂ ಅದನ್ನು ನೀನು ಅವಶ್ಯವಾಗಿ ಮತ್ತು ತಡಮಾಡದೆ ಈಡೇರಿಸಬೇಕು.'

ರಾಮ—ಈಡೇರಿಸುವೆನು, ಈಕೆ ಹೇಳುವುದೊಂದಾದರೆ.

ಅಷ್ಟಾವಕ್ರ—ದೇವಿಗೆ ನಾದಿನಿಯ ಗಂಡ ಋಷ್ಯಶೃಂಗರ ಸಂದೇಶವಿದು—'ವತ್ಸೆ, ತುಂಬಿದ ಗರ್ಭಿಣಿಯೆಂದು ಇಲ್ಲಿಗೆ ನಿನ್ನನ್ನು ಕರೆದುಕೊಂಡು ಬರಲಿಲ್ಲ. ನಿನ್ನ ಸಮಾಧಾನಕ್ಕೆಂದೇ ವತ್ಸ ರಾಮಭದ್ರನನ್ನೂ ಅಲ್ಲಿಯೇ ಇರುವಂತೆ ಮಾಡಿದೆ. ಗಂಡುಮಗನನ್ನು ತೊಡೆಯ ಮೇಲೆತ್ತಿಕೊಂಡ ಆಯುಷ್ಮತಿಯನ್ನು ಮುಂದೆ ನೋಡುವೆವು.'

ರಾಮ (ಹರ್ಷ, ಲಜ್ಜೆ, ಸ್ಮಿತಗಳೊಡನೆ)—ಹಾಗೆಯೇ ಆಗಲಿ. ಭಗವಾನ್ ವಸಿಷ್ಠನು ನನಗೆ ಯಾವ ಆದೇಶವನ್ನೂ ಕಳಿಸಿಲ್ಲವೆ?

ಅಷ್ಟಾವಕ್ರ—ಕೇಳು—

ಕಟ್ಟಿತ್ತೆಮ್ಮಂ ಜನ್ನಂ,
ಪಟ್ಟಂ ಪೊಸದಾಯ್ತು, ಬಾಲನಿರ್ದಪೆಯದರಿಂ
ನಟ್ಟಿರು ಜನರಂಜನೆಯೊಳ್
ನೆಟ್ಟನೆ ಬಳಿಸಾರ್ವ ಜಸಮೆ ನಿಮ್ಮಧಿಕಧನಂ ೧೧

ರಾಮ—ಭಗವಾನ್ ಮೈತ್ರಾವರುಣಿಯ ಅಪ್ಪಣೆಯನ್ನು ಶಿರಸಾವಹಿಸಿದ್ದೇನೆ—

ಸ್ನೇಹಮನಂತೆಯೆ ದಯೆಯುಂ ಸುಖಮುಂ
ತೊರೆಯಲ್ ಸೀತೆಯನೇ ಕಡೆಗೆ;
ಜನರಂ ರಂಜಿಪ ಕಾರ್ಯದೊಳೆನಗೆ
ಮನದಳಲೆಂತೂ ಸಮನಿಸದು. ೧೨

ಸೀತೆ—ಆದ್ದರಿಂದಲೇ ಆರ್ಯಪುತ್ರನು ರಾಘವ ಕುಲಧುರಂಧರ!

ರಾಮ—ಯಾರಲ್ಲಿ? ಅಷ್ಟಾವಕ್ರನಿಗೆ ವಿಶ್ರಾಂತಿಯನ್ನು ಕೊಡಿಸಿರಿ.

ಅಷ್ಟಾವಕ್ರ (ಎದ್ದು, ನಡೆಯುತ್ತ)—ಓ, ಕುಮಾರ ಲಕ್ಷ್ಮಣನು ಬಂದಿರುವನು! (ನಿಷ್ಕ್ರಮ)

(ಪ್ರವೇಶ)

ಲಕ್ಷ್ಮಣ—ಆರ್ಯನಿಗೆ ಜಯವಾಗಲಿ! ನಮ್ಮ ಇಷ್ಟಾನುಸಾರ ಚಿತ್ರಕಾರನು ಆರ್ಯನ ಜೀವನಚರಿತೆಯನ್ನು ಬರೆದುತಂದಿರುವ ಚಿತ್ರಪಟವಿದು. ಆರ್ಯನು ಅವಲೋಕಿಸಬೇಕು.

ರಾಮ—ವತ್ಸ, ಪೇಚಾಡುತ್ತಿರುವ ದೇವಿಯನ್ನು ಹೇಗೆ ವಿನೋದಿಸಬೇಕೆಂಬುದನ್ನು ನೀನು ಬಲ್ಲೆ. ಚಿತ್ರ ಬರೆದಿರುವುದು ಎಲ್ಲಿಯ ವರೆಗೆ ಬಂದಿದೆ?

ಲಕ್ಷ್ಮಣ—ಆರ್ಯೆಯ ಅಗ್ನಿಶುದ್ಧಿಯ ವರೆಗೆ.

ರಾಮ—ಈ ಪಾಪ ಶಾಂತವಾಗಲಿ! (ಸಮಾಧಾನ ಮಾಡುತ್ತ).

ಪುಟ್ಟುವಾಗಲೆ ಪೂಜ್ಯೆಗೇತಕೆ ಬೇರೆ ಶುದ್ಧಿಯ ಯೋಚನೆ?
ತೀರ್ಥವಾರಿಗಮಗ್ನಿಗಂ ತಗದನ್ಯಶುದ್ಧಿಯ ಸೂಚನೆ. ೧೩

ದೇವಿ, ದೇವಯಜನಸಂಭವೆ, ದಯೆದೋರು. ಈ ಅಪವಾದವು ನಿನಗೆ ಜೀವಾವಧಿ ನಿಲ್ಲಬಹುದು :—

ಕಡುಕಷ್ಟ, ಕುಲಧನರು ಜನರ ಮೆಚ್ಚಿಸಬೇಕು
ನಾವಾಡಿದಶುಭವದು ಸಲ್ಲದೌ ನಿನಗೆ;
ಜನ್ಮಸಿದ್ಧಸ್ಥಿತಿಯು ಸುರಭಿಕುಸುಮಕೆ ಮುಡಿಯು
ಪೀಡೆವಡೆಯುವುದಲ್ತು ಕಾಲುಗಳ ಕೆಳಗೆ. ೧೪

ಸೀತೆ—ಆಗಲಿ, ಹಾಗೆಯೇ ಆಗಲಿ. ಬಾ, ಆರ್ಯಪುತ್ರ. ನಿನ್ನ ಚರಿತೆಯನ್ನು ನೋಡೋಣ.

ಲಕ್ಷ್ಮಣ—ಇದೇ ಚಿತ್ರಪಟ.

ಸೀತೆ—(ಸೂಕ್ಷ್ಮವಾಗಿ ದಿಟ್ಟಿಸುತ್ತ)—ಆರ್ಯಪುತ್ರನನ್ನು ಸ್ತುತಿಸುತ್ತಲೋ ಎಂಬಂತೆ ಮೇಲೆ ಒಟ್ಟಿಗಿರುವ ಇವರಾರು?

ಲಕ್ಷ್ಮಣ—ದೇವಿ, ಇವು ರಹಸ್ಯವಾದ ಜೃಂಭಕಾಸ್ತ್ರಗಳು. ಮೊದಲು ಭಗವಾನ್ ಕೃಶಾಶ್ವನಿಂದ ಕೌಶಿಕಋಷಿಗೆ ದತ್ತವಾದುವು. ಅನಂತರ ತಾಟಕೆಯ ಸಂಹಾರ ಸಮಯದಲ್ಲಿ ಅವನಿಂದ ಆರ್ಯನಿಗೆ ಅನುಗ್ರಹಿಸಲ್ಪಟ್ಟುವು.

ರಾಮ—ದೇವಿ, ದಿವ್ಯಾಸ್ತ್ರಗಳನ್ನು ವಂದಿಸು.

ಮುನ್ನ ಬ್ರಹ್ಮಾದಿಗಳು ಬ್ರಹ್ಮಹಿತವನು ಕೋರಿ
ತಪಗೈದು ವರ್ಷಗಳು ಸಾವಿರಾರು,
ತಮ್ಮೊಳಗೆ ತಳತಳಿಪ ತಪದಧಿಕ ತೇಜಗಳೆ
ಎನಿಸೆ ಕಂಡರು ಮುನ್ನ ಗುರುಗಳಿವನು. ೧೫

ಸೀತೆ—ಇವಕ್ಕೆ ನಮಸ್ಕರಿಸುತ್ತೇನೆ.

ರಾಮ—ಇನ್ನು ನೀನು ಹಡೆಯುವ ಮಕ್ಕಳಿಗೂ ಇವು ಸಿದ್ಧಿಸುವುದು ನಿಶ್ಚಯ.

ಸೀತೆ—ನಾನು ಧನ್ಯೆ.

ಲಕ್ಷ್ಮಣ—ಇದು ಮಿಥಿಲಾವೃತ್ತಾಂತ.

ಸೀತೆ—ಅಹಾ, ಅರಳಿದ ಕನ್ನೈದಿಲೆಯಂತೆ ನೀಲವೂ, ಕೋಮಲವೂ, ಕಮನೀಯವೂ ಆದ ಆರ್ಯಪುತ್ರನ ಮೈತುಂಬಿದ ದೇಹಸೌಭಾಗ್ಯ ಎಷ್ಟು ಚೆನ್ನಾಗಿ ಚಿತ್ರಿತವಾಗಿದೆ! ಇವನ ಸೌಮ್ಯ ಸೌಂದರ್ಯಲಕ್ಷ್ಮಿಯನ್ನು ವಿಸ್ಮಯಸ್ತಿಮಿತನಯನನಾಗಿ ನಮ್ಮ ತಂದೆ ನೋಡುತ್ತಿದ್ದಾನೆ. ಶಂಕರನ ಶರಾಸನವನ್ನು ಲೀಲಾಜಾಲವಾಗಿ ಮುರಿದೊಗೆದು ಮುಂಗುರುಳಿನಿಂದ ಮೋಹಕವಾದ ಮುಖಮಂಡಲದಿಂದ ಆರ್ಯಪುತ್ರನು ಕಂಗೊಳಿಸುತ್ತಿರುವನು.

ಲಕ್ಷ್ಮಣ—ಆರ್ಯೆ ನೋಡು, ಇಲ್ಲಿ—

ವಸಿಷ್ಠಾದಿ ಸಂಟರನ್ನು ನಿನ್ನ ತಂದೆ ಮನ್ನಿಪಂ;
ಶತಾನಂದ ಗೌತಮಂ,
ಜಲಕ ಕುಲ ಪುರೋಹಿತಂ,
ಜತೆಗೆ ಬರಲು ಸಂತತಂ. ೧೬

ರಾಮ—ಇದು ಎಷ್ಟು ಚೆನ್ನಾಗಿ ಒಪ್ಪಿದೆ!—

ಜನಕ ರಘೂತ್ತಮ ಕುಲಗಳೊಳೀ ಸಂ-
ಬಂಧವದಾರನು ಮೆಚ್ಚಿಸದು ;
ಇದರೊಳ್ ಕುಡುವವನಂತೆಯೆ ಕೊಳ್ವನು
ಕೌಶಿಕನೊರ್ವನೆ ತಾನೆನಲು ? ೧೭

ಸೀತೆ—ಇಲ್ಲಿ ನೀವು ನಾಲ್ವರು ಸೋದರರೂ ಕಾಲೋಚಿತವಾದ ಗೋದಾನ (=ಕ್ಷೌರ) ಮಂಗಳ ಕರ್ಮವಾದ ಮೇಲೆ ವಿವಾಹಕ್ಕೆ ಅನುವಾಗಿದ್ದೀರಿ. ಓ, ನೋಡುತ್ತಿದ್ದರೆ, ಆ ಸ್ಥಳದಲ್ಲಿಯೇ, ಆ ಕಾಲದಲ್ಲಿಯೇ ಇರುವೆನೆನ್ನಿಸುತ್ತದೆ.

ರಾಮ—ಅಂದು ಚೆಲ್ವಿನ ಕಡಗವೊಪ್ಪುವ ನಿನ್ನ ಕರವನು ಗೌತಮಂ
ಕುಡಲು ಪಿಡಿವಾಗೆನಗೆ ಹರ್ಷದ ಮೂರ್ತಿಯಂ ಪಿಡಿವಂತಿರೆ ;
ಪಿರಿಯ ಸಂತಸದೊದವ ತೋರುತಲಿರ್ದ ಅಂದಿನ ಸಮಯವೆ
ಮರಳಿ ಬಂದಿಹುದೀಗಲೆಂದೆನಿಸಿತ್ತು ಚಿತ್ರವ ನೋಡುತೆ. ೧೮

ಲಕ್ಷ್ಮಣ—ಇದೋ ಈಕೆಯೇ ಆರ್ಯೆ, ಈಕೆ ಪೂಜ್ಯಳಾದ ಮಾಂಡವಿ, ಈ ವಧು ಶ್ರುತಕೀರ್ತಿ.

ಸೀತೆ—ವತ್ಸ, ಈ ಮತ್ತೊಬ್ಬಳಾರು ?

ಲಕ್ಷ್ಮಣ (ಲಜ್ಜೆ ಮತ್ತು ಸ್ಮಿತಗಳಿಂದ ಬೇರೆ ಕಡೆಗೆ ತಿರುಗಿ)—ಓ, ಊರ್ಮಿಳೆಯನ್ನು ಕುರಿತು ಕೇಳುತ್ತಿದ್ದಾಳೆ. (ಪ್ರಕಾಶ) ಆರ್ಯೆ, ನೋಡಲು ಯೋಗ್ಯವಾದ ಇದನ್ನು ನೋಡು—ಇವನೇ ಭಗವಾನ್ ಭಾರ್ಗವ.

ಸೀತೆ (ಗಾಬರಿಯಿಂದ)—ನಡುಗುತ್ತಿರುವೆನಲ್ಲಾ !

ರಾಮ—ಋಷಿಗೆ ನಮಸ್ಕಾರ.

ಲಕ್ಷ್ಮಣ—ಆರ್ಯೆ, ನೋಡು. ಈತನು ಆರ್ಯನಿಂದ . . .

(ಅರ್ಧೋಕ್ತಿಯಲ್ಲೇ ಬಾಯಿ ಹಾಕಿ)

ರಾಮ (ಗದರಿಸಿಕೊಂಡು)—ವತ್ಸ, ನೋಡತಕ್ಕದು ಇನ್ನೂ ಬಹಳವಾಗಿದೆ. ಮಿಕ್ಕವನ್ನು ತೋರಿಸು.

ಸೀತೆ (ಸ್ನೇಹ, ಆದರಗಳಿಂದ ನೋಡುತ್ತ)—ಆರ್ಯಪುತ್ರ, ಈ ವಿನಯಾತಿಶಯವು ನಿನಗೆ ಚೆನ್ನಾಗಿ ಒಪ್ಪುತ್ತದೆ.

ಲಕ್ಷ್ಮಣ—ಇದೀಗ ನಾವು ಅಯೋಧ್ಯೆಗೆ ಬಂದಿದ್ದೇವೆ.

ರಾಮ (ಕಣ್ಣೀರು ಸುರಿಸುತ್ತ)—ಅಯ್ಯೋ, ಅದೇ ಮತ್ತೆ ಮತ್ತೆ ನೆನಪಿಗೆ ಬರುತ್ತಿದೆ—

ತಂದೆಯವರು ಜೀವಿಸಿರಲು,
ಹೊಸವಿವಾಹವೊಪ್ಪಲು,
ತಾಯ್ವಿರೊಲವಿನಿಂದ ತಣಿದ
ದಿನಗಳೆಮಗೆ ಕಳೆದುವು. ೧೯

ಆಗ ಈ ಜಾನಕಿ ಕೂಡ,

ಪತನವಿರಲ ದಂತಮುಕುಲವೆಸೆವ ಬಾಯ ಮಗುವೆನಲ್,
ಮುಗ್ಧನೋಟದಿಂದಮಂತೆ ರಮ್ಯವಾದ ಕುರುಳ್ಗಳಿಂ
ಲಲಿತ ಮಧುರ ಚಂದ್ರಿಕಾ ಸಮಾನ ಸಹಜ ಲೀಲೆಯಿಂ
ತಳೆಯಲಂಗಮಂಬೆಯರ್ಗೊಡರ್ಚಿದಳ್ ಪ್ರಮೋದಮಂ. ೨೦

ಲಕ್ಷ್ಮಣ—ಇವಳೇ ಮಂಥರೆ.

ರಾಮ (ಬೇಗನೆ ಬೇರೆ ಚಿತ್ರವನ್ನು ತೋರಿಸುತ್ತ)—ದೇವಿ, ವೈದೇಹಿ—

ನೋಡು ಇಂಗಳ ಗಿಡವನಿದರಡಿ
ಶೃಂಗವೇರದ ಪುರದೊಳು,
ಸ್ನೇಹಭಾವದ ಬೇಡರೊಡೆಯನ
ಸಂಗವಾದುದು ಮೊದಲೊಳು. ೨೧

ಲಕ್ಷ್ಮಣ (ನಗುತ್ತ, ಸ್ವಗತ)—ಅಹಾ, ಮಧ್ಯದ ತಾಯಿಯ ವೃತ್ತಾಂತವನ್ನು ಆರ್ಯನು ಜಾರಿಸಿಯೇ ಬಿಟ್ಟನು.

ಸೀತೆ—ಓಹೋ, ಇದು ಜಡೆಗಳನ್ನು ಕಟ್ಟಿಕೊಂಡ ಪ್ರಸಂಗದ ಚಿತ್ರ.

ಲಕ್ಷ್ಮಣ—ಮಕ್ಕಳಿಗೆ ಸಂಪದವನೊಸೆದಿತ್ತು ಮುಪ್ಪಿನಲಿ
ಇಕ್ಷ್ವಾಕುಗಳು ತಾವು ತಳೆಯುತ್ತಿದ್ದ
ವನವಾಸವ್ರತವನ್ನು ಬಾಲ್ಯದಲ್ಲಿಯೆ ನಮ್ಮ
ಆರ್ಯ ರಾಮನು ಅಂದು ತಳೆದು ಇದ್ದ. ೨೨

ಸೀತೆ—ಇದೋ, ತಿಳಿಯಾಗಿಯೂ ಪಾವನವಾಗಿಯೂ ಇರುವ ನೀರುಳ್ಳ ಭಗವತಿ ಭಾಗೀರಥಿ.

ರಾಮ—ದೇವಿ, ರಘುಕುಲದೇವತೆ, ನಿನಗೆ ನಮಸ್ಕಾರ.

ಇರದೆ ಸಗರಾಧ್ವರದೆ ತುರಗವನರಸುತಲಿ ಬಗೆಯಲ್ಕೆ ಬುವಿಯನು
ಗುರುಕಪಿಲ ರೋಷಾಗ್ನಿಯುರಿಸಿದ ಪಿತೃಪಿತಾಮಹರ
ಪರಮ ತಪಗೈದಂಗತಾಪವ ಮರೆತು ಮುನ್ನ ಭಗೀರಥಾಖ್ಯನು
ಚಿರಕೆ ದೇವಿಯೆ ನಿನ್ನ ಜಲದಿಂ ಸಗ್ಗಕೆತ್ತಿದನು. ೨೩

ತಾಯೆ, ಇಂತಹ ನೀನು, ಸೊಸೆಯಾದ ಸೀತೆಯ ವಿಷಯದಲ್ಲಿ ಅರುಂಧತಿಯಂತೆಯೇ ಮಂಗಳಕರೆಯಾಗಿರು!

ಲಕ್ಷ್ಮಣ—ಭರದ್ವಾಜರು ಚಿತ್ರಕೂಟಕ್ಕೆ ದಾರಿಯನ್ನು ತಿಳಿಸುವಾಗ, ಕಾಳಿಂದೀ ತೀರದಲ್ಲಿ 'ಶ್ಯಾಮ'ವೆಂಬ ಆಲದ ಮರವೊಂದನ್ನು ಗುರುತು ಹೇಳಿರಲಿಲ್ಲವೆ? ಅದೇ ಇದು.

ರಾಮ—(ಪ್ರೀತಿಯಿಂದ ನೋಡುತ್ತಾನೆ.)

ಸೀತೆ—ಆರ್ಯಪುತ್ರನಿಗೆ ಈ ಪ್ರದೇಶದ ನೆನಪಿನ್ನೂ ಇದೆಯೆ?

ರಾಮ—ಪ್ರಿಯೆ, ಅದನ್ನು ಮರೆಯುವುದಕ್ಕಾದೀತೆ?

ದೂರ ದಾರಿಯು ನಡೆದು ಖೇದದಿನಲಸಮುಗ್ಧಮನೋಹರಂ
ಮೃದಿತ ಕಮಲಿನಿಯಂತೆ ದುರ್ಬಲಮೆನಿಸಲಂಗಗಳೆಲ್ಲಮುಂ,
ನಿಬಿಡತರದಾಲಿಂಗನಂಗಳಿನೊಡಲನೊತ್ತುತಲಾನಿರಲ್
ಒರಗಿ ನೀನೆನ್ನೆದೆಯನಂತೆಯೆ ನಿದ್ದೆಗೈದುದ ನೆನೆವೆನು. ೨೪

ಲಕ್ಷ್ಮಣ—ಇದು ವಿಂಧ್ಯಾಟವಿಯನ್ನು ಪ್ರವೇಶಿಸುವಾಗಲೇ ವಿರಾಧನು ತಡೆದ ದೃಶ್ಯ.

ಸೀತೆ—ಇದು ಬೇಡ. ಆರ್ಯಪುತ್ರನು ಓಲೆಗರಿಗಳನ್ನು ಕೊಡೆಯಂತೆ ಹಿಡಿದು ದಕ್ಷಿಣಾರಣ್ಯದಲ್ಲಿ ನಡೆಯುವ ಈ ಚಿತ್ರವು ನೋಡುವಂತಿದೆ.

ರಾಮ—ಇವೆ ತಪೋವನವಿಲ್ಲಿ ಕಾಂಬವು ಗಿರಿಯ ತೊರೆಗಳ ತಡಿಯಲಿ
ನೋಡು, ವಾನಪ್ರಸ್ಥರಾಶ್ರಯಿಸಿರ್ಪರಿಲ್ಲಿಯ ತರುಗಳ;
ಅತಿಥಿಸತ್ಕ್ರಿಯೆಯಲ್ಲಿ ನಿರತರೆನಿಪ್ಪ ಯತಿಗಳು ಮನೆಗಳ
ಮಾಡಿಕೊಂಡಿದೊ ಮುಷ್ಟಿನೀವಾರಂಗಳಡಿಗೆಯ ಗೆಯ್ವರು. ೨೫

ಲಕ್ಷ್ಮಣ—ಇದು ಜನಸ್ಥಾನದ ಕಾಡಿನ ನಡುವೆ ಕಂಗೊಳಿಸುವ ಪ್ರಸ್ರವಣ ವೆಂಬ ಬೆಟ್ಟ. ನಿಬಿಡವಾದ ತರುನಿಕರದಿಂದ ತುಂಬಿದರಣ್ಯಗಳಿಂದ ಇದರ ತಪ್ಪಲು ಯಾವಾಗಲೂ ನೀಲವರ್ಣದಿಂದ ಹೊಳೆಯುತ್ತದೆ. ಗೋದಾವರೀ ನದಿಯ ಮಂಜುಳನಿನಾದವು ಇದರ ಕಂದರಗಳಲ್ಲಿ ನಿರಂತರವಾಗಿ ಪ್ರತಿ ಧ್ವನಿಸುತ್ತದೆ. ಸಂತತವೂ ಮಳೆಗರೆಯುವ ಮೋಡಗಳಿಂದ ಇದರ ನೀಲ ಕಾಂತಿ ಮತ್ತೂ ಹೆಚ್ಚಿದೆ.

ರಾಮ— ಆ ಬೆಟ್ಟದಲ್ಲಿನಿಯೆ ಲಕ್ಷ್ಮಣನು ಬೆಸಕೈಯೆ
ನೆನೆವೆಯೇಂ ಸಂತಸದೆ ಕಳೆದ ದಿನಗಳನು ;
ನೆನೆವೆಯೇಂ ತಿಳಿನೀರ ನದಿಯ ಗೋದಾವರಿಯ,
ನೆನೆವೆಯೇನದರೆಡೆಯೊಳೆಮ್ಮ ನಡೆಗಳನು ? ೨೬

ಆಗೆಂದರೆ,

ಏನು ಏನನೊ ಮೆಲ್ಲಮೆಲ್ಲನೆ ಗಲ್ಲ ಗಲ್ಲವ ಕೂಡುತೆ
ಸೇರಿಕೊಂಡಿರೆ ತೋರಿ ತೋರಿದ್ದಾಡಿ ನಲಿಯುತಲಾವಿರೆ
ಒರ್ವರೊರ್ವರ ನೀಳ್ದ ತೋಳಿನ ಸಡಿಲವಲ್ಲದ ತೆಕ್ಕೆಯೊಳ್
ಸಿಕ್ಕೆ, ಕಳೆದಾ ಜಾವ ತಿಳಿಯದೆ ರಾತ್ರಿ ಜಾರಿತ್ತೊಯ್ಯನೆ. ೨೭

ಲಕ್ಷ್ಮಣ—ಇವಳೇ ಪಂಚವಟಿಯಲ್ಲಿ ಬಂದ ಶೂರ್ಪಣಖಿ.

ಸೀತೆ—ಹಾ, ಆರ್ಯಪುತ್ರ ! ನಿನ್ನ ದರ್ಶನ ಇಲ್ಲಿಗೇ ಕಡೆ.

ರಾಮ—ಪ್ರಿಯೆ, ವಿಯೋಗಭೀತೆ, ಇದು ಬರಿಯ ಚಿತ್ರ.

ಸೀತೆ—ಏನೇ ಆಗಲಿ, ದುರ್ಜನರಿಂದ ದುಃಖ ತಪ್ಪಿದ್ದಲ್ಲ.

ರಾಮ—ಆಹಾ, ಜನಸ್ಥಾನದ ವೃತ್ತಾಂತ ಕಣ್ಣುಮುಂದೆ ನಡೆಯುತ್ತಿರು ವಂತಿದೆ.

ಲಕ್ಷ್ಮಣ— ಆ ಪಾಪಿ ರಕ್ಕಸರು ಕನಕಮೃಗ ಕಪಟವನು
ಗೈದರದು ನೋಯಿಸುವವೋಲ್ ತೊಳೆದ ಮೇಲೂ ;
ಶೂನ್ಯವನದೊಳಗಣ್ಣ ಮತಿಗೆಟ್ಟು ಗೈದುದಕೆ
ಕಲ್ಲಳುವುದೆನೆ ವಜ್ರದೆದೆಯು ಬಿರಿಯುವುದು. ೨೮

ಸೀತೆ (ಕಣ್ಣೀರು ತುಂಬಿ, ಸ್ವಗತ)—ಹೇ ದೇವ, ರಘುಕುಲಾನಂದ, ನನಗಾಗಿ ಇಷ್ಟೊಂದು ಸಂತಪಿಸಿದೆ !

ಲಕ್ಷ್ಮಣ (ರಾಮನನ್ನು ನೋಡಿ, ಸಾಭಿಪ್ರಾಯವಾಗಿ)—ಆರ್ಯ, ಇದೇನಿದು ?

ಕಣ್ಣ ನೀರಿದು ಹರಿದ ಮುತ್ತಿನ ಮಣಿಯು ಹಾರದಿನೆಂಬವೋಲ್
ಸುರಿದು ಧಾರಾಕಾರದಿಂದಿದೊ ಬುವಿಯೊಳುರುಳ್ವುದು ಜರ್ಜರಂ ;
ಬಗೆಯು ಬೇಗೆಯು ರುದ್ಧಮೆಂದೊಡಮೊಯ್ಯಸೂದಿಸಿ ಹೃದಯಮಂ
ಪರರಿಗೂಹಾಯೋಗ್ಯಮಾದುದು ಅದಿರ್ವ ತುಟಿನಾಸಿಕಗಳಿಂ. ೨೯

ರಾಮ—ವತ್ಸ,

ಅಂದು ತಡೆದೊಡಮೆಂತೊ ಪ್ರತಿಯತ್ನದಾಸೆಯಲಿ
ಪ್ರಿಯೆಯ ವಿರಹೋತ್ಪನ್ನ ತೀವ್ರ ತಾಪವನು ;
ಇಂದು ಮೇಣ್ ದುಃಖಾಗ್ನಿ ಮನದೊಳುರಿದೇಳುತಲಿ
ಹೃದಯ ಮರ್ಮವ್ರಣದ ತೆರದೆ ಸೋಯಿಪುದು. ೩೦

ಸೀತೆ—ಅಯ್ಯೋ, ಛೀ, ಮಿತಿಮೀರುತ್ತಿರುವ ಈ ಮನದಳಲನ್ನು ನೋಡಿದರೆ ನಾನೂ ಆರ್ಯಪುತ್ರನನ್ನು ಅಗಲಿದಂತೆಯೇ ಎನಿಸುತ್ತಿದೆ.

ಲಕ್ಷ್ಮಣ (ಸ್ವಗತ)—ಇರಲಿ, ಇವರ ಮನಸ್ಸನ್ನು ಬೇರೆಡೆಗೆ ತಿರುಗಿಸುತ್ತೇನೆ. (ಚಿತ್ರವನ್ನು ನೋಡಿ, ಪ್ರಕಾಶ) ಇದು, ಮನ್ವಂತರಕಾಲದಷ್ಟು ಹಳಬನೂ ಪೂಜ್ಯನೂ ಆದ ಗೃಧ್ರರಾಜ ಜಟಾಯುವಿನ ಪರಾಕ್ರಮಕಾರ್ಯಗಳ ನಿದರ್ಶನ.

ಸೀತೆ—ಹಾ, ತಾತ, ನೀನು ಮಕ್ಕಳ ಮೇಲಿನ ಅಕ್ಕರೆಯನ್ನು ಕೊನೆ ಮುಟ್ಟಿಸಿದೆ.

ರಾಮ—ಹಾ, ತಾತ, ಕಾಶ್ಯಪ, ಪಕ್ಷಿರಾಜ, ನಿನ್ನಂತೆ ಪಾವನತೀರ್ಥನಾದ ಸಾಧು ಮತ್ತೆಲ್ಲಿ ತಾನೆ ದೊರೆತಾನು ?

ಲಕ್ಷ್ಮಣ—ಇದು ಜನಸ್ಥಾನಕ್ಕೆ ಪಶ್ಚಿಮದಲ್ಲಿರುವ 'ಚಿತ್ರಕುಂಜ'ವೆಂಬ ದಂಡಕಾರಣ್ಯ ಭಾಗ. ಇಲ್ಲಿಯೇ ದನು ಕಬಂಧಾದಿಗಳು ನೆಲಸಿದ್ದುದು. ಈ ಕಡೆಯಿರುವುದು ಋಷ್ಯಮೂಕಪರ್ವತದಲ್ಲಿನ ಮತಂಗ ಮುನಿಗಳ ಆಶ್ರಮ. ಈಕೆಯೇ ಶಬರತಾಪಸಿಯಾದ ಸಿದ್ಧ-ಶ್ರಮಣೆ. ಇದೇ ಪಂಪಾ ಎಂಬ ಪದ್ಮಸರೋವರ.

ಸೀತೆ—ಇಲ್ಲಿಯೇ ಅಲ್ಲವೆ ಆರ್ಯಪುತ್ರನು ಶಕ್ತಿಧೈರ್ಯಗಳನ್ನು ಕಳೆದುಕೊಂಡು ಗಳಗಳನೆ ಗೋಳಿಟ್ಟುದು ?

ರಾಮ—ದೇವಿ, ಇದು ರಮಣೀಯವಾದ ಸರೋವರ—

ನೀಲವರ್ಣದ ಮತ್ತ ಕಲಹಂಸಂಗಳಲ್ಲಿಯೆ ಸುಳಿಯಲು
ಪುಂಡರೀಕಗಳೆಡೆಯೊಳವುಗಳ ದೊಡ್ಡ ನಾಳಗಳದಿರಲು ;
ಬಾಷ್ಪವಾರಿಯು ಬಿದ್ದು ಉದ್ಭವಿಪಾಂತರಾಳದ ಕಾಲದೆ
ಭೂಮಿಭಾಗಗಳಂದು ಕನ್ನೈದಿಲೆಗಳಿಂದೆನಲೆಸೆದುವು. ೩೧

ಲಕ್ಷ್ಮಣ—ಈತನು ಆರ್ಯ ಹನುಮಂತ.

ಸೀತೆ—ಎಷ್ಟೋ ಕಾಲಕ್ಕೊಂದು ಸಾರಿ ಜೀವಲೋಕವನ್ನು ಉದ್ಧಾರಮಾಡಿದ ಉಪಕಾರಶೀಲನೂ ಮಹಾನುಭಾವನೂ ಈತನೇ.

ರಾಮ—ಭಾಗ್ಯಮೀತಂ ಮಹಾಬಾಹುವಂಜನಾನಂದವರ್ಧನಂ.
ತದ್ವೀರ್ಯದಿಂ ಸುಕೃತಿಗಳ್ ನಾವುಂ ಮೇಣ್ ಭುವಸಂಗಳುಂ. ೩೨

ಸೀತೆ—ವತ್ಸ, ಕುಸುಮಿತ ಕದಂಬವೃಕ್ಷಗಳಿಂದ ನವಿಲುಗಳನ್ನು ಕುಣಿಸುತ್ತಿರುವ ಈ ಬೆಟ್ಟದ ಹೆಸರೇನು? ಇಲ್ಲಿ ಮರದ ಬುಡದಲ್ಲಿ, ಆರ್ಯಪುತ್ರನು ಮೂರ್ಛಿತನಾಗಿ, ಅಳುತ್ತಿರುವ ನಿನ್ನಿಂದ ಅವಲಂಬಿತನಾಗಿರುವುದು ಚಿತ್ರಿತವಾಗಿದೆ. ಅವನ ಶರೀರಕಾಂತಿ ಮಸುಳಿಸಿ ಅನುಭಾವ ಸೌಭಾಗ್ಯ ವಷ್ಟೇ ಉಳಿದಿರುವುದಲ್ಲಾ !

ಲಕ್ಷ್ಮಣ—ತಾನೀ ಶೈಲಂ ತರುಸುರಭಿತಂ ಮಾಲ್ಯವಂತಂ ದಲಿತ್ತಲ್
ನೀಲಂ ಸ್ನಿಗ್ಧಂ ನವಜಲಮುಚಂ ನೆತ್ತಿಯಂ ಮುಚ್ಚಿರಲ್ಕೀ
ಆರ್ಯಂ . . .

ರಾಮ—. . . ಮಾತಂ ನಿಲಿಸು ನಿಲಿಸೈ ಮುಂದೆ ನಾಂ ಕೇಳಲಾರೆಂ
ಮತ್ತಂ ಬಂದತ್ತೆನಗೆನಿಪುದಾ ಜಾನಕೀವಿಪ್ರಯೋಗಂ. ೩೩

ಲಕ್ಷ್ಮಣ—ಇಲ್ಲಿಂದ ಮುಂದಕ್ಕೆ ಆರ್ಯ, ಕಪಿವೀರರು, ರಾಕ್ಷಸವೀರರು, ಇವರೆಸಗಿದ ಅಸಂಖ್ಯಾತ ಹಾಗೂ ಉತ್ತರೋತ್ತರ ಅದ್ಭುತಕಾರ್ಯಗಳ ಚಿತ್ರಗಳಿವೆ. ಆರ್ಯೆಗೆ ಆಗಲೇ ಆಯಾಸವಾಗಿದೆ. ಆದ್ದರಿಂದ ವಿಶ್ರಮಿಸಿಕೊಳ್ಳಬೇಕೆಂದು ಬಿನ್ನವಿಸುತ್ತೇನೆ.

ಸೀತೆ—ಆರ್ಯಪುತ್ರ, ಈ ಚಿತ್ರವನ್ನು ನೋಡುತ್ತ ಒಂದು ಬಯಕೆಯುಂಟಾಗಿದೆ. ಅದನ್ನು ವಿಜ್ಞಾಪಿಸುತ್ತೇನೆ.

ರಾಮ—ಅಲ್ಲ, ಆಜ್ಞಾಪಿಸು.

ಸೀತೆ—ಮತ್ತೊಮ್ಮೆ ಪ್ರಸನ್ನ ಗಂಭೀರ ವನರಾಜಿಗಳಲ್ಲಿ ವಿಹರಿಸುತ್ತ, ಭಗವತಿ ಭಾಗೀರಥಿಯ ಪವಿತ್ರ, ನಿರ್ಮಲ, ಶೀತೋದಕದಲ್ಲಿ ಸ್ನಾನಮಾಡ ಬೇಕೆಂಬುದೇ ನನ್ನ ಬಯಕೆ.

ರಾಮ—ವತ್ಸ, ಲಕ್ಷ್ಮಣ!

ಲಕ್ಷ್ಮಣ—ಇದೋ ಇದ್ದೇನೆ.

ರಾಮ—ವತ್ಸ, ಈಕೆಯ ಬಯಕೆಯನ್ನು ತಡವಿಲ್ಲದೆ ಈಡೇರಿಸಬೇಕೆಂದು ಇದೀಗ ಗುರುಗಳು ಹೇಳಿಕಳಿಸಿದ್ದರಲ್ಲವೆ? ಆದ್ದರಿಂದ ಕುಲುಕದೆ ಸುಖವಾಗಿ ಉರುಳುವ ರಥವೊಂದನ್ನು ಸಿದ್ಧಮಾಡು.

ಸೀತೆ—ಆರ್ಯಪುತ್ರ, ನೀವೂ ಸಂಗಡ ಬರಬೇಕು.

ರಾಮ—ಪ್ರಿಯೆ, ನಿನ್ನ ಹೃದಯ ಕಠಿಣವೆಂದಂತಾಯಿತು. ಇದನ್ನೂ ಹೇಳಬೇಕೆ?

ಸೀತೆ—ಹಾಗಾದರೆ ನನಗೆ ಸಂತೋಷ, ತುಂಬಾ ಸಂತೋಷ.

ಲಕ್ಷ್ಮಣ—ಆರ್ಯನ ಅಪ್ಪಣೆ. (ನಿಷ್ಕ್ರಮ)

ರಾಮ—ಪ್ರಿಯೆ, ಇಲ್ಲೇ ಕಿಟಕಿಯ ಹತ್ತಿರ ಒಂದು ಕ್ಷಣ ಕುಳಿತುಕೊಳ್ಳೋಣ.

ಸೀತೆ—ಹಾಗೆಯೇ ಆಗಲಿ. ಈ ಆಯಾಸದಿಂದ ನನ್ನನ್ನೂ ನಿದ್ರೆ ಎಳೆಯುತ್ತಿದೆ.

ರಾಮ—ಹಾಗಾದರೆ ನನ್ನನ್ನು ಬಿಗಿಯಾಗಿ ಹಿಡಿದುಕೊಂಡು ಹೆಜ್ಜೆಯಿಡು.

ಆಯಾಸಕಾತರಕೆ ಬೆಮರ್ವನಿಯು ಮೂಡಿರುವ
 ನಳಿತೋಳನರ್ಪಿಸೌ ಕೊರಳೊಳೆನ್ನ ;
ಚಂದ್ರಕರಚುಂಬನಕೆ ದ್ರವಿಸುತಿಹ ಚಂದ್ರಮಣಿ-
 ಹಾರಮೆನೆ ಸೊಬಗೆನಗೆ ಸಂಜೀವನ. ೩೪

(ಅಂತೆ ಆಲಿಂಗಿತನಾಗಿ, ಆನಂದದಿಂದ) ಪ್ರಿಯೆ, ಇದೇನು?

ಎನಗೆ ನಿಶ್ಚಯಿಸಲ್ಕೆ ಬಾರದು ಸುಖವೊ ದುಃಖವೊ ಯಾವುದೋ,
ಮೋಹವಪ್ಪುದೊ ನಿದ್ರೆಯುಪ್ಪುದೊ ವಿಷದ ವಿಸರವೊ ಮದವಿದೋ,
ನಿನ್ನ ಮೈಯಿನ ಸೋಂಕುಸೋಂಕಿಂಗೆನ್ನ ಕರಣಗಳುಡುಗಲೀ
ಬಗೆವಿಕಾರವು ತಿರುಪಿ ಚೈತನ್ಯಾಂತರಾಳವ ಕವಿದಿದೆ. ೩೫

ಸೀತೆ—ತಮ್ಮ ಪ್ರೀತಿ ಈಗಲೂ ಸ್ಥಿರವಾಗಿದೆಯೆಂದಾಯಿತೇ ಹೊರತು ಬೇರೇನೂ ಅಲ್ಲ.

ರಾಮ—ಎನ್ನ ಬಾಡಿದ ಜೀವಕುಸುಮವ ಮರಳಿ ಅರಳಿಸುತಿರುವುವು,
ಸಕಲಕರಣಂಗಳ್ಗೆ ತೃಪ್ತಿಯನಿತ್ತು ಮೋಹವ ತರುವುವು;
ಸರಸಿಜಾಕ್ಷಿಯೆ, ನೀನು ನುಡಿವೀ ಸವಿಯ ನುಡಿಗಳು ಕರ್ಣಕೆ
ಅಮೃತವೆಂದೆನೆ ಹೃದಯಕಂತೆಯೆ ವರ ರಸಾಯನವೆನಿಪವು. ೩೬

ಸೀತೆ—ನಲ್ನುಡಿಗಾರ, ಬಾ ಇನ್ನು ಮಲಗೋಣ. (ಮಲಗಲು ತಲೆದಿಂಬನ್ನು ಅತ್ತಿತ್ತ ಹುಡುಕುತ್ತಾಳೆ)

ರಾಮ—ಪ್ರಿಯೆ, ಏನನ್ನು ಹುಡುಕುವೆ?—

ಮದುವೆಯಾದ ಸಮಯದಿಂದ ಮನೆಯೊಳಂತೆ ಕಾಡೊಳು,
ಬಾಲ್ಯದಲ್ಲಿ ಹರೆಯದಲ್ಲಿ ಬಿಡದೆ ಎಲ್ಲ ಪದದೊಳು,
ನಿನ್ನ ನಿದ್ದೆಗಾದುದಲ್ತೆ ತಾನಿದೇ ಸದಾಶ್ರಯ,
ರಾಮ ಬಾಹುವೊಂದೆ ದಿಂಬು, ಅನ್ಯಳನ್ನು ಕೂಡದು. ೩೭

ಸೀತೆ (ನಿದ್ದೆಯನ್ನು ಸೂಚಿಸಿ)—ನಿಜ ಆರ್ಯಪುತ್ರ, ನಿಜ (ನಿದ್ದೆಹೋಗುವಳು).

ರಾಮ—ಲಲ್ಲೆವಾತಿನ ನಲ್ಲೆ ನನ್ನೆದೆಯ ಮೇಲೆ ಆಗಲೇ ನಿದ್ದೆಮಾಡಿರುವಳು! (ನೋಡುತ್ತ)

ಇವಳೆನಗೆ ಗೃಹಲಕ್ಷ್ಮಿ, ಕಣ್ಗಳಿಗಿವಳೆ ವರ್ತಿಯು ಸುಧೆಯು, ಮೈಸೋಂ-
ಕಿವಳ ತರ್ಪುದು ಮೈಗೆ ಚಂದನರಸದ ಶೈತ್ಯವನು
ಇವಳ ತೋಳಿದು ಕೊರಳಿಗೀವುದು ತವದ ಮುತ್ತಿನ ಸರದ ತಣ್ಪನು,
ಇವಳದೆಲ್ಲವು ಹಿತವು, ದುಸ್ಸಹವೊಂದೆ ವಿರಹವದು. ೩೮

(ಪ್ರವೇಶ)

ಪ್ರತೀಹಾರಿ—ದೇವ, ಬಂದಾಯಿತು.

ರಾಮ—ಏ, ಯಾರು?

ಪ್ರತೀಹಾರಿ—ಒಡೆಯನ ಹತ್ತಿರದ ಸೇವಕ—ದುರ್ಮುಖ.

ರಾಮ (ಸ್ವಗತ)—ಅಂತಃಪುರದಲ್ಲಿ ಕೆಲಸಕ್ಕಿರುವ ದುರ್ಮುಖನಲ್ಲವೆ? ಅವನನ್ನು ಪೌರಜಾನಪದರ ನಡುವೆ ಗೂಢಚಾರನಾಗಿ ಕಳುಹಿಸಿದ್ದೆ. (ಪ್ರಕಾಶ) ಬರಲಿ.

(ಪ್ರತೀಹಾರಿಯ ನಿಷ್ಕ್ರಮ)

(ಪ್ರವೇಶ)

ದುರ್ಮುಖ (ಸ್ವಗತ)—ಹಾ, ದೇವಿಯನ್ನು ಕುರಿತು ಇಂತಹ ಊಹಾತೀತವಾದ ಜನಾಪವಾದವನ್ನು ಈಗ ಹೇಗೆ ತಾನೆ ದೇವನಿಗೆ ನಿವೇದಿಸಲಿ? ಅಯ್ಯೋ, ಅದೃಷ್ಟಹೀನನಾದ ನನಗೆ ಇದು ಕರ್ತವ್ಯವೇ ಆಗಿಬಿಟ್ಟಿದೆ.

ಸೀತೆ (ಕನವರಿಸುವಳು)—ಹಾ ಆರ್ಯಪುತ್ರ, ಸೌಮ್ಯ, ಎಲ್ಲಿರುವೆ?

ರಾಮ—ಅಯ್ಯೋ, ಚಿತ್ರದರ್ಶನದಿಂದ ಮನಸ್ಸಿನ ಕಳವಳಕ್ಕೆ ಕಾರಣವಾದ ಹಾಳು ವಿರಹಭಾವನೆ ದೇವಿಯನ್ನು ಕನಸಿನಲ್ಲೂ ಕಾಡುತ್ತಿದೆ. (ಪ್ರೀತಿಯಿಂದ ಅವಳ ಅಂಗವನ್ನು ಸವರುತ್ತ)

ಒಂದೆ ಸುಖದುಃಖದೊಳು ಸೋಡಲ್ಕೊಂದೆ ನಿಖಿಲಾವಸ್ಥೆಯಲ್ಲಾ-
ನಂದ ಕಾರಣವೆಡೆಗೆ ಮುಪ್ಪಿಗೆ ಮುರಿಯದಾ ರಸವು
ಕುಂದೆ ತಡೆಗಳು ಸಂದ ಕಾಲದೆ, ನಿಂದ ಪಕ್ವಪ್ರೇಮಸಾರವೆ
ಎಂದೆನಿಪ ಸೊಗವಡೆವ ಧನ್ಯನು ವಿರಳ ಬುವಿಯೊಳಗೆ. ೩೯

ದುರ್ಮುಖ (ಸಮೀಪಿಸಿ)—ದೇವನಿಗೆ ಜಯವಾಗಲಿ.

ರಾಮ—ತಿಳಿದುಕೊಂಡು ಬಂದಿರುವುದನ್ನು ಹೇಳು.

ದುರ್ಮುಖ—ಪೌರಜಾನಪದರೆಲ್ಲರೂ ಪ್ರಭುವನ್ನು ಹೀಗೆ ಹೊಗಳುತ್ತಿದ್ದಾರೆ—'ದಶರಥ ಮಹಾರಾಜನನ್ನು ನಾವು ಮರೆಯುವಂತೆ ಮಾಡಿದ್ದಾನೆ—ಅರಸನಾದ ರಾಮ' ಎಂಬುದಾಗಿ.

ರಾಮ—ಇದು ಹೊಗಳಿಕೆಯ ಕಥೆಯಾಯಿತು. ನನ್ನ ಕುಂದೇನಾದರೂ ಇದ್ದರೆ ಹೇಳು; ಅದನ್ನು ಸರಿಪಡಿಸಿಕೊಳ್ಳುವುದಕ್ಕಾದರೂ ಯತ್ನಿಸಬಹುದು.

ದುರ್ಮುಖ (ಕಣ್ಣೀರು ಬಿಡುತ್ತ)—ಕೇಳು, ಪ್ರಭೋ. (ಕಿವಿಯಲ್ಲಿ) ಹೀಗೆ ಹೀಗೆ.

ರಾಮ—ಅಕಟಕಟಾ, ಈ ವಾಗ್ವಜ್ರದ ಪೆಟ್ಟು ಎಷ್ಟು ತೀವ್ರ!

(ಮೂರ್ಛೆ ಬೀಳುವನು)

ದುರ್ಮುಖ—ಪ್ರಭೋ, ಸಂತೈಸಿಕೊ.

ರಾಮ (ಸಂತೈಸಿಕೊಂಡು)—

ಅಕಟ! ಪರಗೃಹವಾಸನಿಂದೆಯು ಸಲ್ಲದವನಿಜೆಗೆಂಬುದು
ಅಂದೆ ನಿಶ್ಚಿತಮದ್ಭುತೋಪಾಯಂಗಳಿಂದೆನಲಿಂದದೇ,

ಮತ್ತೆ ಬಂದುದು ಎನ್ನ ದೈವದ ದುರ್ವಿಪಾಕದ ಫಲವೆನೆ
ಸುತ್ತಲುಂ ಗಡ ಹಬ್ಬಿಕೊಂಡುದು ಹುಚ್ಚುಕುನ್ನಿಯ ವಿಷವೆನೆ. ೪೦

ಈಗ ಹತಭಾಗ್ಯನಾದ ನಾನೇನು ಮಾಡಲಿ? (ವಿಮರ್ಶಿಸಿ, ದೈನ್ಯದಿಂದ) ಅಥವಾ ಇಷ್ಟಲ್ಲದೆ ಮತ್ತೇನು?—

ಏಂಗೈದೊಡಂ ಜನವ ಮೆಚ್ಚಿಪುದೆ ಸಜ್ಜನರ
ವ್ರತವೆಂಬೆ, ಸಾಕ್ಷಿಯಿದಕೆನ್ನ ಪಿತನು;
ಆ ವ್ರತವ ಪಾಲಿಸಿದನವನಲ್ತೆ ಕಡೆತನಕ
ಎನ್ನನೇ ಬಿಡುತಂತೆ ಪ್ರಾಣಗಳನು. ೪೧

ಇದೀಗ ಭಗವಾನ್ ವಸಿಷ್ಠರು ಹೇಳಿಕಳಿಸಿರುವ ಸಂದೇಶವಾದರೂ ಇದೇ. ಅಲ್ಲದೆ,

ಸೂರ್ಯಕುಲಜರು ಲೋಕವಿಸುತ ಭೂಪರು ಮುನ್ನ
ಬೆಳಗಿಸಿದ ಸಚ್ಚರಿತ ವಿಮಲವಲ್ತೆ!
ಎನ್ನ ದೆಸೆಯಿಂದದಕೆ ಕೊಂಡೆಯದ ಕೊಳೆ ಸೋಂಕೆ
ಚೀ, ಸುಡಲಿ, ನನಗಿಂತಧನ್ಯನುಂಟೆ? ೪೨

ಹಾ ದೇವಿ, ದೇವಯಜನಸಂಭವೆ, ಹಾ ಜನ್ಮಪವಿತ್ರಿತವಸುಂಧರೆ, ಹಾ ಮುನಿಜನಕನಂದಿನಿ, ಹಾ ಪಾವಕ-ವಸಿಷ್ಠ-ಅರುಂಧತೀ-ಸಂಸ್ತುತ-ಪುಣ್ಯಶೀಲೆ, ಹಾ ರಾಮಮಯ ಜೀವಿತೆ, ಹಾ ಮಹಾರಣ್ಯವಾಸ ಪ್ರಿಯಸಖಿ, ಹಾ ತಾತಪ್ರಿಯೆ, ಹಾ ಸ್ವಲ್ಪಭಾಷಿಣಿ, ಅಯ್ಯೋ ಇಂತಹ ನಿನಗೆ ಇಂತಹ ಗತಿಯೆ!

ಲೋಕವೆಲ್ಲವು ಶುದ್ಧವಾಯಿತು ನಿನ್ನ ದೆಸೆಯಿಂದೆನ್ನಲು,
ನಿನ್ನ ಕುರಿತೇ ಜನಗಳುಕ್ತಿಯುು ನೆರೆದುದಿಂತಿದಶುದ್ಧವು;
ಲೋಕವೆಲ್ಲವು ಕಾಪನಾಂತುದು ನಿನ್ನ ದೆಸೆಯಿಂದೆನ್ನಲು
ನೀನೆ ಸಾಯುವೆಯಲ್ತೆ ತಬ್ಬಲಿಯಂತೆ ಕಾವವರಿಲ್ಲದೆ. ೪೩

(ದುರ್ಮುಖನನ್ನು ಕುರಿತು)—ದುರ್ಮುಖ, ಲಕ್ಷ್ಮಣನಿಗೆ ಹೇಳು; ಹೊಸದಾಗಿ ಮಹಾರಾಜನಾಗಿರುವ ರಾಮನು ಕಟ್ಟಾಜ್ಞೆ ಮಾಡಿದ್ದಾನೆಂದು. (ಕಿವಿಯಲ್ಲಿ) ಹೀಗೆ, ಹೀಗೆ.

ದುರ್ಮುಖ—ಅಯ್ಯೋ, ಇದೇನು ? ಯಾರೋ ದುರ್ಜನರು ಹೇಳಿದ ಮಾತ್ರಕ್ಕೆ ಅಗ್ನಿ ಪರಿಶುದ್ಧೆಯೂ ಗರ್ಭಸ್ಥಪವಿತ್ರಸಂತಾನೆಯೂ ಆದ ದೇವಿಯನ್ನು ಕುರಿತು ಹೀಗೆ ನಿರ್ಧರಿಸಬಹುದೆ ?

ರಾಮ—ನಿಲ್ಲಿಸು. ಏನು, ಪೌರಜಾನಪದರು ದುರ್ಜನರೆ ?

ಇಕ್ಷ್ವಾಕುವಂಶಂ ಜನರಾಗಪಾತ್ರಂ
ಜಾತಂ ಗಡಾ ದೈವದೆ ದೋಷಬೀಜಂ
ಮಾಸೋಜಿಗಂ ಶುದ್ಧಿಯ ವರ್ತಮಾನಂ
ವಿಶ್ವಾಸ್ಯವೆಂತಪ್ಪುದು ದೂರವೃತ್ತಂ. ೪೪

ಆದ್ದರಿಂದ ಹೋಗು.

ದುರ್ಮುಖ—ಅಯ್ಯೋ, ದೇವಿ ! (ನಿಷ್ಕ್ರಮ)

ರಾಮ—ಅಕ್ಕಟಾ, ಕಷ್ಟ. ಅತಿಘೋರಕರ್ಮವನ್ನೆಸಗುವ ಘಾತಕನಾದೆನೇ !

ಸಲಹಿ ಶೈಶವದಿಂದೆ ಸತಿಯನು, ನೆಲಸಿರಲು ಕಡುಮೋಹ, ಬೇರೆಯ
ಸಲಹುವಾ ಜನರನ್ನು ಕಾಣದ, ಬಾಲೆಯೀಕೆಯನು
ಸಲೆ ಕಪಟದಿಂದೀಗ ಮೃತ್ಯುಗೆ ಬಲಿಯನೀಯುತಲಿರ್ಪೆ ಕಟುಕನು
ಸಲಹಿ ಮನೆಯಲಿ ಹೆಣ್ಣುಹಕ್ಕಿಯನವನೆ ಕೊಲುವಂತೆ. ೪೫

ಆದರಿಂದ ಅಸ್ಪೃಶ್ಯನಾದ ಈ ಪಾತಕಿ ದೇವಿಯನ್ನೇಕೆ ಕಲುಷಿಸ ಬೇಕು ? (ಸೀತೆಯ ತಲೆಯನ್ನು ಮೆಲ್ಲನೆತ್ತಿ ತೋಳನ್ನೆಳೆದುಕೊಳ್ಳುತ್ತ)—

ಅಪೂರ್ವಕರ್ಮಚಂಡಾಲಂ
ನಾನೆನ್ನಂ ಬಿಡು ಮುಗ್ಧೆಯೆ
ವಿಷವೃಕ್ಷಮನೇ ಕೊಂಡೆಯ್
ಚಂದನಂಗೆತ್ತು ಘೋರಮಂ. ೪೬

(ಎದ್ದು) ಅಯ್ಯೋ, ಜೀವಲೋಕವೇ ಈಗ ತಿರುಗುಮುರುಗಾಯಿತು ; ಇಲ್ಲಿಗೆ ರಾಮನ ಜೀವಿತದ ಪ್ರಯೋಜನವೇ ಕೊನೆಗಂಡಿತು. ಜಗತ್ತೀ ಇಂದು ಶೂನ್ಯವಾದ ಜೀರ್ಣಾರಣ್ಯ. ಸಂಸಾರ ಅಸಾರ; ಶರೀರ ವೊಂದು ಕ್ಲೇಶ ; ಅನಾಥನಾದೆನಲ್ಲಾ ; ಏನು ಮಾಡಲಿ ? ಗತಿಯೇನು ? ಅಥವಾ—

ದುಃಖವ ಭೋಗಿಸಲೆಂದೇ ರಾಮನೊ-
ಳಿಟ್ಟನು ವಿಧಿ ಚೈತನ್ಯವನು;
ಮರ್ಮವ ಭೇದಿಪ ಪ್ರಾಣಗಳಾದವು
ಎದೆಯೊಳು ವಜ್ರದ ಶೂಲಗಳು. ೪೭

ಓ ತಾಯಿ ಅರುಂಧತಿಯೆ, ಓ ಪೂಜ್ಯರಾದ ವಸಿಷ್ಠವಿಶ್ವಾಮಿತ್ರರೆ, ಓ ಅಗ್ನಿದೇವ, ಓ ಭೂಮಿತಾಯಿ, ಓ ತಾತ ಜನಕ, ಓ ತಂದೆ, ಓ ತಾಯಿ, ಓ ಪ್ರಿಯಸಖ ಸುಗ್ರೀವ, ಓ ಸೌಮ್ಯ ಹನುಮಂತ, ಓ ಪರಮೋಪಕಾರಿ ಲಂಕಾಪತಿ ವಿಭೀಷಣ, ಓ ಸಖಿ ತ್ರಿಜಟೆ, ನೀವೆಲ್ಲರೂ ಇಂದು ರಾಮ-ಹತಕನಿಂದ ವಂಚಿತರಾದಿರಿ, ಅವಮಾನಿತರಾದಿರಿ. ಅಥವಾ ಅವರ ಹೆಸರನ್ನು ಕರೆಯಲು ನಾನು ಈಗ ಯಾರು?

ಆ ಮಹಾತ್ಮರು ಕೂಡ ಪಾಪದ
ಸೋಂಕ ಪಡೆವರು ತಡೆಯದೆ;
ಈ ಕೃತಘ್ನ ದುರಾತ್ಮನವರಾ
ಪೆಸರ ಕೊಳ್ಳುವ ಸಮಯದೆ. ೪೮

ಏಕೆಂದರೆ ನಾನು,

ಎದೆಯನೊರಗುತೆ ನಂಬಿ ನಿದ್ದೆಯ ಮಾಡಿದೆನ್ನೀ ಮಡದಿಯಂ
ಸಡಿಲಿಸುತ್ತಿದೊ ಪ್ರೇಮಪತ್ನಿಯನೆನ್ನ ಮನೆಯಾ ಲಕ್ಷ್ಮಿಯಂ;
ಬಳೆದ ಗರ್ಭದ ಭಾರವದಿರಲು ಬಗೆಯೊಳೊಯ್ಯನೆ ನೋಯ್ವಳಂ
ಎಸೆವೆ ನಿರ್ದಯನಾಗಿ ಪೆರತಿನಿಗಳ್ಗೆ ಬಲಿಯನ್ನೆಸೆವವೋಲ್. ೪೯

(ಸೀತೆಯ ಕಾಲುಗಳನ್ನು ತಲೆಗೊತ್ತಿಕೊಂಡು) ರಾಮನ ಶಿರಸ್ಸಿಗೆ ಇದೇ ನಿನ್ನ ಪಾದಪಂಕಜದ ಕಡೆಯ ಸ್ಪರ್ಶ.

(ಗೋಳಾಡುವನು)

(ತೆರೆಯಲ್ಲಿ)

ಅಯ್ಯೋ, ಅನ್ಯಾಯ! ಅನ್ಯಾಯ!

ರಾಮ—ಏ, ಇದೇನು ತಿಳಿಯಿರಿ.

(ಮತ್ತೆ ತೆರೆಯಲ್ಲಿ)

ಯಮುನೆಯ ತೀರದೊಳುಗ್ರ ತಪಂಗಳ
ಗೈಯುವ ಋಷಿಗಳ ತಂಡವಿದು;

ಲವಣನ ಭೀತಿಯೊಳ್ಳೈತಂದಿರುವುದು
ರಕ್ಷಕ ನೀನೇ ಶರಣೆಂದು. ೫೦

ರಾಮ—ಆಹಾ, ಇನ್ನೂ ರಾಕ್ಷಸರ ಭೀತಿಯಿದೆಯೆ? ದುರಾತ್ಮನಾದ, ಮಧುರ ಮತ್ತು ಕುಂಭೀನಸಿಗಳ ಮಗನಾದ, ಲವಣನನ್ನು ಉನ್ಮೂಲನಮಾಡಲು ಈಗ ಶತ್ರುಘ್ನನನ್ನೇ ಕಳುಹಿಸಿಕೊಡುತ್ತೇನೆ. (ಕೆಲವು ಹೆಜ್ಜೆ ನಡೆದು, ಮತ್ತೆ ಹಿಂದಿರುಗಿ) ಅಯ್ಯೋ ದೇವಿ, ಈ ಅವಸ್ಥೆಯಲ್ಲಿರುವ ನೀನು ಏನಾಗುವೆ; ಭಗವತಿ ವಸುಂಧರೆ, ಶ್ಲಾಘ್ಯಳಾದ ನಿನ್ನ ಮಗಳು ಜಾನಕಿಯನ್ನು ನೀನೇ ನೋಡಿಕೊಳ್ಳಬೇಕು—

ಜನಕ ರಘೂತ್ತಮ ವಂಶದ್ವಯಕೆನೆ
ಅವಳೊರ್ವಳೆ ಕುಲಮಂಗಳೆಯು;
ಪಾವನ ಶೀಲೆಯನವಳನು ನೀನೇ
ಹಡೆದೌ ಪುಣ್ಯದ ವೇದಿಯೊಳು. ೫೧

(ಅಳುತ್ತ ನಿಷ್ಕ್ರಮ)

ಸೀತೆ—ಓ ಸೌಮ್ಯ, ಆರ್ಯಪುತ್ರ, ಎಲ್ಲಿರುವೆ? (ತಟ್ಟನೆ ಎದ್ದು) ಅಯ್ಯೋ, ಕೇಡು, ದುಃಸ್ವಪ್ನದ ಪೀಡೆಯಿಂದ ವಂಚಿತಳಾಗಿ ಆರ್ಯಪುತ್ರನನ್ನು ಅಗಲಿದಂತೆ ಕಂಗಾಲಾಗಿದ್ದೇನೆ. (ನೋಡಿ) ಅಯ್ಯೋ, ಕೇಡು, ಮಲಗಿದ್ದ ನನ್ನೊಬ್ಬಳನ್ನೇ ಹೀಗೆ ಬಿಟ್ಟು ನಾಥನೆಲ್ಲಿ ಹೋದನು? ಇರಲಿ, ಅವನ ಮೇಲೆ ಸಿಟ್ಟಾಗುತ್ತೇನೆ, ಅವನೆದುರಿಗೆ ನನ್ನ ಸ್ಥೈರ್ಯ ನಿಲ್ಲುವುದೊಂದಾದರೆ? ಇಲ್ಲಿ ಪರಿಜನರು ಯಾರು?

(ಪ್ರವೇಶ)

ದುರ್ಮುಖ—ದೇವಿ, ಕುಮಾರ ಲಕ್ಷ್ಮಣನು ಬಿನ್ನವಿಸುತ್ತಾನೆ—'ರಥವು ಸಿದ್ಧವಾಗಿದೆ. ದೇವಿ ಹತ್ತಬೇಕು.'

ಸೀತೆ—ಇದೋ ಹತ್ತಿಕೊಳ್ಳುತ್ತೇನೆ. (ಎದ್ದು ನಡೆದುಬಂದು) ಗರ್ಭಭಾರವು ಅದಿರುತ್ತದೆ. ಮೆಲ್ಲನೆ ಹೋಗೋಣ.

ದುರ್ಮುಖ—ದೇವಿ ಹೀಗೆ ಬರಬೇಕು, ಹೀಗೆ.

ಸೀತೆ—ರಘುಕುಲದ ದೇವತೆಗಳಿಗೆ ನಮೋನಮಃ. (ಎಲ್ಲರ ನಿಷ್ಕ್ರಮ)

ಇಲ್ಲಿಗೆ 'ಚಿತ್ರದರ್ಶನ'ವೆಂಬ ಮೊದಲನೆಯ ಅಂಕ ಮುಗಿದುದು.

---

# ಎರಡನೆಯ ಅಂಕ

(ತೆರೆಯಲ್ಲಿ)

ತಪಸ್ವಿನಿಗೆ ಸ್ವಾಗತ!

(ಪ್ರಯಾಣಿಕಳ ವೇಷದಲ್ಲಿ ತಾಪಸಿಯ ಪ್ರವೇಶ)

ತಾಪಸಿ—ಓ, ದೂರದಿಂದಲೇ ವನದೇವತೆ ಫಲಕುಸುಮಗಳಿಂದ ನನಗೆ ಅರ್ಘ್ಯವನ್ನು ಕೊಡುತ್ತಿದ್ದಾಳೆ.

(ಪ್ರವೇಶ)

ವನದೇವತೆ (ಅರ್ಘ್ಯವನ್ನು ಅರ್ಪಿಸಿ)—

ನಿಮಗೆ ಬೇಕಾದಂತೆ ವನವಿದು ಭೋಗ್ಯವೆನಗಿದು ಸುದಿನವು,
ಸುಜನಸಂಗವು ಸುಜನಕಪ್ಪುದದೆಂತೊ ಪುಣ್ಯದ ಫಲವೆನೆ;
ಇಲ್ಲಿ ತಣ್ಣೆಳಲಂತೆ ತಿಳಿನೀರ್ ಮತ್ತೆ ತಾಪಸರಶನವು
ಫಲವೊ ಮೂಲವೊ ನಿಮಗೆ ಬೇಹುದು ಅಲ್ಲವಸ್ಯರಧೀನವು. ೧

ತಾಪಸಿ—ಇಲ್ಲಿ ಹೇಳತಕ್ಕುದೇನಿದೆ—

ಪ್ರೀತಿಯುಕ್ಕುವ ವೃತ್ತಿ, ನಿಯಮಿತ ವಚನ ವಿನಯದೆ ಮಧುರವು,
ಪ್ರಕೃತಿಯಿಂದಲೆ ಶುಭವ ಚಿಂತಿಪ ಮತಿ, ಅನಿಂದಿತ ಪರಿಚಯ;
ಮೊದಲೊಳಂತೆಯೆ ಕಡೆಗೆ ಬದಲಿಸದಿರ್ಪ ರಸವಿದು ಸತತವು
ಶುದ್ಧ ನಿಷ್ಕಲ್ಮಷಮಿದೆಸೆವುದು, ಸಾಧು ಜನರ ರಹಸ್ಯವು. ೨

(ಇಬ್ಬರೂ ಕುಳಿತುಕೊಳ್ಳುವರು)

ವನದೇವತೆ—ಪೂಜ್ಯಳನ್ನು ಯಾರೆಂದು ತಿಳಿಯಲಿ?

ತಾಪಸಿ—ನಾನು ಆತ್ರೇಯಿ.

ವನದೇವತೆ—ಆರ್ಯೆ, ಆತ್ರೇಯಿ, ಇಲ್ಲಿಗೆ ಬಂದ ಕಾರಣವೇನು? ದಂಡಕಾರಣ್ಯವನ್ನು ಪ್ರವೇಶಿಸಿ ಬರುವ ಪ್ರಯೋಜನವೇನು?

ಆತ್ರೇಯಿ— ಅಗಸ್ತ್ಯ ಮುಂತಾದ ಉದ್ಗೀಥವಿದರಲ್ಲಿ
ಬಹಳ ಮುನಿಗಳು ವಾಸಗೈಯುತಿಹರು;

ಅವರಿಂದ ನಿಗಮಾಂತ ವಿದ್ಯೆಯನು ಕಲಿಯಲ್ಕೆ
ನಡೆತಂದೆ ವಾಲ್ಮೀಕಿಯತ್ತಣಿಂದೆ. ೩

ವನದೇವತೆ—ಮಿಕ್ಕ ಮುನಿಗಳೇ ಬ್ರಹ್ಮಪಾರಾಯಣಕ್ಕೆಂದು ಆ ಪುರಾಣ ಬ್ರಹ್ಮವಾದಿಯಾದ ಪ್ರಾಚೇತಸನನ್ನು ಆಶ್ರಯಿಸುವಾಗ, ಆರ್ಯೆ ಇಷ್ಟು ದೀರ್ಘಪ್ರವಾಸದ ಆಯಾಸವನ್ನು ತೆಗೆದುಕೊಂಡುದೇಕೋ ತಿಳಿಯುವುದಿಲ್ಲ.

ಆತ್ರೇಯಿ—ಅಲ್ಲಿ ಅಧ್ಯಯನಕ್ಕೆ ದೊಡ್ಡ ವಿಘ್ನವೊದಗಿದ್ದರಿಂದ ದೀರ್ಘಪ್ರವಾಸವನ್ನು ಕೈಗೊಳ್ಳಬೇಕಾಯಿತು.

ವನದೇವತೆ—ಏನು ವಿಘ್ನ ?

ಆತ್ರೇಯಿ—ಆ ಪೂಜ್ಯಮುನಿಯ ಬಳಿಗೆ ಅತ್ಯಂತ ಅದ್ಭುತವಾಗಿರುವ ಮತ್ತು ಆಗ ತಾನೆ ಸ್ತನ್ಯಪಾನವನ್ನು ಬಿಟ್ಟ ವಯಸ್ಸಿನ ಎರಡು ಶಿಶುಗಳನ್ನು ದೇವತೆಯೊಬ್ಬಳು ತಂದೊಪ್ಪಿಸಿರುವಳು. ಆ ಶಿಶುದ್ವಯವು ಕೇವಲ ಋಷಿಗಳ ಅಂತರಂಗವನ್ನಷ್ಟೇ ಅಲ್ಲ, ಸಕಲ ಚರಾಚರ ಭೂತಗಳ ಹೃದಯವನ್ನೂ ಪ್ರೇಮದಿಂದ ತುಂಬಿಸಿದೆ.

ವನದೇವತೆ—ಅವುಗಳ ಹೆಸರಿನ ಪರಿಚಯವುಂಟೆ ?

ಆತ್ರೇಯಿ—ಆ ದೇವತೆಯೇ ಅವರ ಹೆಸರು 'ಕುಶ' ಮತ್ತು 'ಲವ' ಎಂಬುದನ್ನೂ ಅವರ ಪ್ರಭಾವವನ್ನೂ ತಿಳಿಸಿದ್ದುಂಟು.

ವನದೇವತೆ—ಪ್ರಭಾವವೇನು ?

ಆತ್ರೇಯಿ—ಅವರಿಗೆ ಜೃಂಭಕಾಸ್ತ್ರಗಳ ರಹಸ್ಯ ಜನ್ಮಸಿದ್ಧವಾಗಿಯೇ ತಿಳಿದಿರುವುದಂತೆ ?

ವನದೇವತೆ—ಓಹೊ, ಇದು ನಿಜವಾಗಿಯೂ ವಿಚಿತ್ರವೇ.

ಆತ್ರೇಯಿ—ಪೂಜ್ಯ ವಾಲ್ಮೀಕಿಯೇ ಅವರನ್ನು ಕಾಪಾಡಲು ಒಪ್ಪಿ ಸಾಕಿ ಸಲಹಿದನು. ಚೌಲಕರ್ಮವಾದ ಕೂಡಲೆ ಅವರಿಗೆ ವೇದವೊಂದನ್ನು ಬಿಟ್ಟು ಉಳಿದ ವಿದ್ಯೆಗಳನ್ನೆಲ್ಲ ಕಲಿಸಿದನು. ಮುಂದೆ, ಅವರಿಗೆ ಗರ್ಭಕಾಲದಿಂದೆಣಿಸಿ ಹನ್ನೊಂದನೆ ವರ್ಷ ನಡೆಯುತ್ತಿರುವಾಗ ಗುರುವೇ ಕ್ಷತ್ರಿಯ ವಿಧಿಯಿಂದ ಉಪನಯನ ಮಾಡಿ ವೇದಾಧ್ಯಯನವನ್ನೂ ಮಾಡಿಸಿದನು. ಅತಿ ಮೇಧಾವಿಗಳೂ, ಉಜ್ವಲ ಪ್ರಜ್ಞಾಶಾಲಿಗಳೂ ಆದ ಅವರ ಸಂಗಡ ನಮ್ಮಂತಹವರ ಅಧ್ಯಯನಕ್ಕೆ ಯೋಗವಿಲ್ಲ. ಏಕೆಂದರೆ—

ಗುರುವು ಸುಮತಿಗೆ ಕೊಡುವ ವಿದ್ಯೆಯ ಮಂದಮತಿಗೂ ಕೊಡುವನು,
ಅವರೊಳರಿಯುವ ಶಕ್ತಿಯಿಳಿಯನು ಶಕ್ತಿಯಿರ್ದೊಡೆ ಕಿಡಿಸನು ;
ಆದೊಡಪ್ಪುದು ಬಹಳ ಭೇದವು ಫಲವ ನೋಡಲ್ಕೆಂತೆನೆ
ಬಿಂಬ ಪೊಳೆವುದು ಪಳಿಕಿನಲ್ಲೆನೆ ಮಣ್ಣ ಮುದ್ದೆಯೊಳಲ್ಲವು. ೪

ವನದೇವತೆ—ನಿನ್ನ ಅಧ್ಯಯನಕ್ಕೆ ಒದಗಿದ ವಿಘ್ನವು ಇದೇಯೊ ?

ಆತ್ರೇಯಿ—ಮತ್ತೂ ಒಂದಿದೆ.

ವನದೇವತೆ—ಮತ್ತೊಂದು ಯಾವುದು ?

ಆತ್ರೇಯಿ—ಇದೇ. ಒಂದು ದಿನ ಆ ಬ್ರಹ್ಮರ್ಷಿ ಮಾಧ್ಯಾಹ್ನಿಕಕ್ಕಾಗಿ ತಮಸಾನದಿಗೆ ಹೋಗುತ್ತಿದ್ದನು. ಅಲ್ಲಿ ಜೋಡಿ ಹಕ್ಕಿಗಳಾದ ಕ್ರೌಂಚಗಳಲ್ಲಿ ಒಂದು ಬೇಡನಿಂದ ಹತವಾದುದನ್ನು ಕಂಡನು. ಇದ್ದಕ್ಕಿದ್ದಂತೆಯೇ ಹೊಳೆದ ವಾಗ್ರೂಪಿಣಿಯಾದ ದೇವಿಯನ್ನು, ಅಸಂಕೀರ್ಣವಾಗಿ ಪರಿಣತಗೊಂಡ ಅನುಷ್ಟುಪ್ ಛಂದಸ್ಸಿನ ರೂಪದಿಂದ ಆತನು ಉದ್ಗರಿಸಿದನು—

ಬೇಡನೆ, ಪೆರ್ಮೆಯ ಪಡೆಯ
ಲ್ವೇಡೆಂದುಂ ಸರ್ವಕಾಲಮಿಂತೀ ತೆರದಿಂ
ನೀಡುಂ ಕೊಂದಯ್ ಬೇಟಮ
ನಾಡುತೆ ಮೈಮರೆದ ಕೊಂಚೆಜೋಡಿಯೊಳೊಂದಂ. ೫

ವನದೇವತೆ—ಆಶ್ಚರ್ಯ ! ವೇದಭಿನ್ನವಾದ ಇದು ಛಂದಸ್ಸಿನ ಹೊಸ ಅವತಾರವೇ ಸರಿ.

ಆತ್ರೇಯಿ—ಅದೇ ಹೊತ್ತಿಗೆ ಶಬ್ದಬ್ರಹ್ಮಪ್ರಕಾಶ ಆವಿರ್ಭವಿಸಿದ್ದ ಋಷಿಯನ್ನು ಸೃಷ್ಟಿಕರ್ತನಾದ ಭಗವಾನ್ ಬ್ರಹ್ಮದೇವನು ಸಂಧಿಸಿ, "ಋಷಿಯೇ, ನಿನಗೆ ವಾಙ್ಮಯಬ್ರಹ್ಮದ ಸಾಕ್ಷಾತ್ಕಾರವಾಗಿದೆ. ಆದ್ದರಿಂದ ರಾಮನ ಚರಿತೆಯನ್ನು ಹೇಳು. ನಿನ್ನ ಆರ್ಷವಾದ ಪ್ರತಿಭಾಚಕ್ಷುಸ್ಸಿನ ಜ್ಯೋತಿ ಅವ್ಯಾಹತವಾದುದು. ನೀನೇ ಆದಿ ಕವಿ" ಎಂದು ನುಡಿದು ಅಲ್ಲಿಯೇ ಅಂತರ್ಧಾನಹೊಂದಿದನು. ಅನಂತರ ಭಗವಾನ್ ಪ್ರಾಚೇತಸನು ಮನುಷ್ಯರಲ್ಲೇ ಮೊದಲನೆಯದೂ, ಶಬ್ದಬ್ರಹ್ಮನ ಅಪೂರ್ವವಿವರ್ತವೂ ಆದ ರಾಮಾಯಣವೆಂಬ ಇತಿಹಾಸವನ್ನು ರಚಿಸಿದನು.

ವನದೇವತೆ—ಭಲಾ, ಹಾಗಾದರೆ ಜಗತ್ತಿಗೇ ಒಂದು ಅಲಂಕಾರವನ್ನು ತೊಡಿಸಿದಂತಾಯಿತು.

ಆತ್ರೇಯಿ—ಆದ್ದರಿಂದ ಹೇಳಿದೆ; ಅಲ್ಲಿ ಅಧ್ಯಯನಕ್ಕೆ ದೊಡ್ಡ ವಿಘ್ನವುಂಟಾಯಿತೆಂದು.

ವನದೇವತೆ—ಸರಿಯೆ.

ಆತ್ರೇಯಿ—ವಿಶ್ರಾಂತಿಯಾದಂತಾಯಿತು. ಈಗ ಅಗಸ್ತ್ಯಾಶ್ರಮಕ್ಕೆ ದಾರಿಯನ್ನು ತಿಳಿಸು.

ವನದೇವತೆ—ಈ ಕಡೆ ಪಂಚವಟಿಯನ್ನು ಪ್ರವೇಶಿಸಿ ಇದೇ ಗೋದಾವರೀ ತೀರದಲ್ಲಿ ಹೋಗು.

ಆತ್ರೇಯಿ (ಕಣ್ಣೀರು ಬಿಡುತ್ತ)—ಇದೇ ತಪೋವನವೆ? ಇದು ಪಂಚವಟಿಯೆ? ಈ ನದಿಯೇ ಗೋದಾವರಿಯೆ? ಈ ಬೆಟ್ಟವೇ ಪ್ರಸ್ರವಣವೆ? ಹಾಗಾದರೆ ಜನಸ್ಥಾನವನದ ದೇವತೆಯಾದ ವಾಸಂತಿಯೇ ನೀನೇನು?

ವನದೇವತೆ—ಎಲ್ಲವೂ ನಿಜ.

ಆತ್ರೇಯಿ—ಅಯ್ಯೋ, ವತ್ಸೆ, ಜಾನಕಿ—

> ನಿನ್ನ ನಲ್ಮೆಯ ಬಂಧುವರ್ಗವು ಎಲ್ಲವಿಲ್ಲಿದೆ ನೋಡಲು
> ವಿಷಯವಿಂತಿದೆ ನಿನ್ನ ಕುರಿತಾ ಮಾತುಕಥೆಗಳಿಗೆಲ್ಲಕೆ;
> ನಾಮಶೇಷಳೆ ನೀನು ಎಂದೊಡಮಿದನು ನೋಡಲ್ಕೊಡನೆಯೆ
> ಮರಳಿ ನಿನ್ನನೆ ಕಣ್ಣಿನಿಂದಲೆ ಕಂಡವೋಲೀಗಾದುದು. ೬

ವಾಸಂತಿ (ಭಯದಿಂದ ಸ್ವಗತ)—ಏನು ನಾಮಶೇಷಳೆಂದಳಲ್ಲವೆ! (ಪ್ರಕಾಶ) ಸೀತಾದೇವಿಗೆ ಏನು ಅಪಾಯವೊದಗಿತು?

ಆತ್ರೇಯಿ—ಅಪಾಯವಷ್ಟೇ ಅಲ್ಲ; ಅಪವಾದವೂ. (ಕಿವಿಯಲ್ಲಿ) ಇಂತಿಂತು.

ವಾಸಂತಿ—ಅಕ್ಕಟಾ, ದೈವದ ಪೆಟ್ಟು ದಾರುಣ! (ಮೂರ್ಛೆಹೋಗುವಳು).

ಆತ್ರೇಯಿ—ಶುಭೆ, ಸಂತೈಸಿಕೊ, ಸಂತೈಸಿಕೊ.

ವಾಸಂತಿ—ಅಯ್ಯೋ, ಪ್ರಿಯಸಖಿ, ಮಹಾಭಾಗೆ, ನಿನ್ನ ಜೀವನ ಇಂತಾಯಿತೆ? ಅಯ್ಯೋ, ರಾಮಭದ್ರ, ಅಥವಾ ನಿನ್ನ ಮಾತೇಕೆ? ಆರ್ಯೆ, ಆತ್ರೇಯಿ, ಹಾಗೆ ಕಾಡಿನಲ್ಲಿ ಪರಿತ್ಯಜಿಸಿ ಲಕ್ಷ್ಮಣನು ಹಿಂದಿರುಗಿದ ಮೇಲೆ ಸೀತಾದೇವಿಗೇನಾಯಿತು? ಏನಾದರೂ ಸಮಾಚಾರವಿದೆಯೆ?

ಆತ್ರೇಯಿ—ಇಲ್ಲ; ಏನೂ ಇಲ್ಲ.

ವಾಸಂತಿ—ಅಯ್ಯೋ, ಕಷ್ಟ. ರಘುಕುಲವಿನ್ನೂ ವಸಿಷ್ಠ, ಅರುಂಧತಿಯರ ರಕ್ಷಣೆಯಲ್ಲಿರುವಾಗ, ಮುಪ್ಪಿನ ರಾಣಿಯರು ಇನ್ನೂ ಜೀವಿಸಿರುವಾಗ, ಇದು ಹೇಗಾಯಿತು?

ಆತ್ರೇಯಿ—ಗುರುಜನರೆಲ್ಲರೂ ಆಗ ಋಷ್ಯಶೃಂಗನ ಆಶ್ರಮದಲ್ಲಿದ್ದರು. ಈಗ ತಾನೆ ಆ ಹನ್ನೆರಡು ವರ್ಷಗಳ ಯಜ್ಞ ಮುಗಿಯಿತು. ಋಷ್ಯಶೃಂಗನು ಸನ್ಮಾನಮಾಡಿ ಗುರುಜನರನ್ನು ಕಳುಹಿಸಿದನು. ಆಗ ಭಗವತಿ ಅರುಂಧತಿ 'ಸೊಸೆಯಿಲ್ಲದ ಅಯೋಧ್ಯೆಯನ್ನು ನಾನು ಪ್ರವೇಶಿಸು ವುದಿಲ್ಲ'ವೆಂದುಬಿಟ್ಟಳು. ಅದನ್ನೇ ರಾಮನ ತಾಯಂದಿರೂ ಅನುಮೋದಿ ಸಿದರು. ಇದನ್ನೆಲ್ಲ ನೋಡಿಯೇ ವಸಿಷ್ಠರ ಪರಿಶುದ್ಧ ವಾಣಿ ಹೀಗೆ ಬಂತು—'ವಾಲ್ಮೀಕಿಯ ತಪೋವನಕ್ಕೆ ಹೋಗಿ ನಾವೆಲ್ಲರೂ ಅಲ್ಲಿ ವಾಸ ಮಾಡೋಣ' ಎಂದು.

ವಾಸಂತಿ—ಈಗ ಆ ರಾಜನ ಕೆಲಸವೇನು?

ಆತ್ರೇಯಿ—ಆ ರಾಜನು ಈಗ ಅಶ್ವಮೇಧಯಾಗವನ್ನು ಆರಂಭಿಸಿದ್ದಾನೆ.

ವಾಸಂತಿ—ಅಯ್ಯೋ ಕೇಡು; ಬೇರೆ ಮದುವೆಯನ್ನೂ ಮಾಡಿಕೊಂಡಾಯಿತೆ?

ಆತ್ರೇಯಿ—ಪಾಪ ಶಾಂತವಾಗಲಿ! ಇಲ್ಲ, ಇಲ್ಲ.

ವಾಸಂತಿ—ಹಾಗಾದರೆ ಯಜ್ಞದಲ್ಲಿ ಸಹಧರ್ಮಚಾರಿಣಿ ಯಾರು?

ಆತ್ರೇಯಿ—ಚಿನ್ನದಲ್ಲಿ ಮಾಡಿದ ಸೀತೆಯ ಪ್ರತಿಕೃತಿ.

ವಾಸಂತಿ—ಆಹಾ, ಆಶ್ಚರ್ಯ!

> ವಜ್ರಕಿಂತ ಕಠೋರ, ಕುಸುಮಕಿಂತಲು ಮೃದುಲ,
> ಚಿತ್ತ ಲೋಕೋತ್ತರರ, ತಿಳಿವರೊಳವೇ. ೭

ಆತ್ರೇಯಿ—ವಾಮದೇವನೇ ಅಭಿಮಂತ್ರಿಸಿದ ಯಜ್ಞಾಶ್ವವನ್ನು ಸಂಚರಿಸಲು ಬಿಟ್ಟಾಗಿದೆ. ಶಾಸ್ತ್ರಾನುಸಾರವಾಗಿ ಅದರ ರಕ್ಷಕರನ್ನೂ ನಿಯಮಿಸಿ ಯಾಗಿದೆ. ದಿವ್ಯಾಸ್ತ್ರಗಳ ಸಂಪ್ರದಾಯವನ್ನೆಲ್ಲ ಕಲಿತಿರುವ ಮತ್ತು ಲಕ್ಷ್ಮಣನ ಮಗನಾದ ಚಂದ್ರಕೇತು ಅವರ ನಾಯಕ. ಚತುರಂಗ ಬಲಸಮೇತನಾದ ಆತನನ್ನು ಕುದುರೆಯ ಬೆಂಗಾವಲಿಗೆ ಕಳುಹಿಸಿದೆ.

ವಾಸಂತಿ (ಪ್ರೀತಿ, ಕೌತುಕಗಳ ಕಣ್ಣೀರನ್ನು ತುಂಬಿ)—ಓ, ಕುಮಾರ ಲಕ್ಷ್ಮಣನಿಗೂ ಮಗನೋ! ನಾನು ಬದುಕಿದ್ದು ಸಾರ್ಥಕವಾಯಿತು, ತಾಯಿ.

ಆತ್ರೇಯಿ—ಈ ನಡುವೆ ಬ್ರಾಹ್ಮಣನೊಬ್ಬನು ತನ್ನ ಮಗನ ಹೆಣವನ್ನು ರಾಜ ದ್ವಾರದಲ್ಲಿಟ್ಟುಕೊಂಡು 'ಅಯ್ಯಯ್ಯೋ, ಅನ್ಯಾಯ'ವೆಂದು ಕೂಗಾಡಿದನು. ಆಗ ರಾಜನ ದೋಷವಿಲ್ಲದೆ ಪ್ರಜೆಗಳಲ್ಲಿ ಅಕಾಲಮೃತ್ಯುವೊದಗಲಾರದೆಂದು ದಯಾಮಯನಾದ ರಾಮಭದ್ರನು ತನ್ನ ತಪ್ಪನ್ನು ಹುಡುಕ ಹೊರಟನು. ಆಗ ಇದ್ದಕ್ಕಿದ್ದಂತೆಯೇ ಅಶರೀರವಾಣಿ ನುಡಿಯಿತು—

'ಶಂಬೂಕನೆಂಬೊರ್ವ ವೃಷಲನಾಚರಿಸುವನು
ಕಡುತಪವನೆಲ್ಲಿಯೋ ಧರಣಿಯೊಳಗೆ;
ಶಿರದ ಛೇದದ ಶಿಕ್ಷೆಗವನರ್ಹನೆನೆ, ರಾಮ,
ಕೊಂದವನ ಬದುಕಿಸೈ ವಿಪ್ರನಿವನ.' ೮

ಇದನ್ನು ಕೇಳಿದವನೇ ಹಿರಿದ ಕತ್ತಿಯನ್ನು ಕೈಯಲ್ಲಿ ಹಿಡಿದು, ಪುಷ್ಪಕ ವಿಮಾನವನ್ನೇರಿ, ಎಲ್ಲ ದಿಕ್ಕುಗಳಲ್ಲೂ ವಿದಿಕ್ಕುಗಳಲ್ಲೂ ಶೂದ್ರತಾಪಸನನ್ನರಸುತ್ತ ಜಗತ್ಪತಿ ಸಂಚರಿಸಲಾರಂಭಿಸಿದನು.

ವಾಸಂತಿ—ಶಂಬೂಕನೆಂಬ ಶೂದ್ರನು ಹೊಗೆಯನ್ನು ಕುಡಿಯುತ್ತ ಇಲ್ಲಿ ಜನಸ್ಥಾನದಲ್ಲೇ ತಪಗೈಯುತ್ತಿದ್ದಾನೆ. ಆದ್ದರಿಂದ ಮತ್ತೆ ರಾಮಭದ್ರನು ಈ ವನವನ್ನು ಅಲಂಕರಿಸಬಹುದೆ?

ಆತ್ರೇಯಿ—ಶುಭೆ, ನಾನಿನ್ನು ಹೋಗುವೆನು.

ವಾಸಂತಿ—ಆರ್ಯೆ, ಆತ್ರೇಯಿ, ಹಾಗೆಯೇ ಆಗಲಿ. ಹಗಲಿನ ತಾಪವು ಬಹಳವಾಗಿ ಏರಿದೆ:—

ನವೆಗೆ ತಿಕ್ಕುವ ಗಜಕಪೋಲದ ಭರಕೆ ಬೀಳುವ, ಬೇಗೆಯಿಂ
ತೊಟ್ಟು ಕಳಚಿದ, ಪೂಗಳಿಂ ಪೂಜಿಪವು ಮರಗಳೆ ನದಿಯನು;
ನೆಳಲೊಳಡಗಿದ ಹಕ್ಕಿ ತೊಗಟೆಯ ಬುಡದ ಹುಳುಗಳನೆಳೆವುವು
ಕೊಕ್ಕಿನಿಂದೀ, ದಣಿದ ನೀರ್ವಕ್ಕಿಗಳು ಕೂಜನಗೈವುವು. ೯

## ಇದು ಶುದ್ಧವಿಷ್ಕಂಭಕ

---

(ಪುಷ್ಪಕವಿಮಾನದಲ್ಲಿರುವ ರಾಮ; ದಯೆಗೂಡಿದ ಮುಖಮುದ್ರೆ; ಕೈಯಲ್ಲಿ ಹಿರಿದ ಕತ್ತಿ)

ರಾಮ— ಓ ಎನ್ನ ಬಲಗೈಯೆ, ಕಡಿ ಶೂದ್ರಮುನಿಯನ್ನು
ಮೃತ ವಿಪ್ರಶಿಶುವಿಂಗೆ ಜೀವ ಬರಿಸೆ;

ರಾಮನಾ ತನುವಿರುವೆ, ಗುರುಗರ್ಭಖಿನ್ನೆಯನು
ಸೀತೆಯನೆ ನೂಕಿರುವೆ, ನಿನಗೆ ದಯೆಯೆ? ೧೦

(ಮನಸ್ಸಿಲ್ಲದಿದ್ದರೂ ಕೈಯಿಂದ ಕಡಿದು) ರಾಮನಿಗೆ ಅನುರೂಪವಾದ ಕೆಲಸವನ್ನು ಮಾಡಿಯಾಯಿತು. ಬ್ರಾಹ್ಮಣನ ಮಗನು ಬದುಕಬಹುದೇಸೋ!

(ಪ್ರವೇಶ)

ದಿವ್ಯಪುರುಷ—ದೇವ, ಜಯ ಜಯ.

ದಂಡಧರ, ನೀನೀಯೆ ಜವನಿಂದಮಭಯವನು,
ಕೂಸು ಜೀವಿಸಿತೆನಗೆ ಬಂದುದೀ ಮೇಲ್ಮೆ;
ಶಂಬೂಕ ನಾನಡಿಗೆ ತಲೆವಾಗಿ ನಿಂದಿಹೆನು,
ಸತ್ಸಂಗಜಂ ಮೃತಿಯುಮುದ್ಧಾರಕರವೆ. ೧೧

ರಾಮ—ಎರಡೂ ಪ್ರಿಯವಾದ ಸುದ್ದಿಗಳೇ. ಇನ್ನು ನಿನ್ನ ಉಗ್ರತಪಸ್ಸಿನ ಫಲಗಳನ್ನು ಆನಂದದಿಂದ ಅನುಭವಿಸು—

ಆನಂದ ಮೋದಗಳು ಪುಣ್ಯಸಂಪದವಂತೆ
ಸಂತತವು ನೆಲಸಿರುವ ಲೋಕಗಳಿವು;
ತೈಜಸಂಗಳೆನಲ್ಕೆ 'ವೈರಾಜ'ವೆಸರಾಂತ
ಶುಭಧಾಮ ನಿನಗಕ್ಕೆ ಎಂದೊರೆವೆನು. ೧೨

ಶಂಬೂಕ—ಈ ದೊಡ್ಡ ಪದವಿ ತಮ್ಮ ಅನುಗ್ರಹದ ಫಲವೇ ಆಗಿದೆ. ಇದಕ್ಕೆ ತಪಸ್ಸಿನಿಂದೇನು? ಅಥವಾ—ತಪಸ್ಸಿನಿಂದ ತುಂಬಾ ಉಪಕಾರವೂ ಆಗಿದೆ:—

ನಿನ್ನನರಸುವರೆಲ್ಲ ಜಗದೊಳು ಶರಣಜೀವಿಗಳೊಡೆಯನೇ,
ಏನ್ನನರಸುತ್ತಿನ್ನು ಶೂದ್ರನ ನೂರುಯೋಜನ ದೂರಕೆ
ಬಂದೆಯೆಂಬುದು ತಪದನುಗ್ರಹವಲ್ಲದಿರ್ದೊಡೆ ಮತ್ತೆ ನೀ-
ನಿಂತಯೋಧ್ಯೆಯ ಬಿಟ್ಟು ದಂಡಕವನಕೆ ನಡೆತರುತಿದ್ದೆಯಾ? ೧೩

ರಾಮ—ಏನು? ಇದು ನಿಜವಾಗಿಯೂ ದಂಡಕಾರಣ್ಯವೆ? (ಸುತ್ತಲೂ ನೋಡಿ) ಅಯ್ಯೋ, ನಿಜ—

ಎಣ್ಣೆಗಪ್ಪಿನ ಬಣ್ಣವೊಂದೆಡೆ, ಬಯಲು ಬೇರೆಡೆ ಭೀಷಣ,
ತಾಣತಾಣದೆ ದಿಕ್ಕ ತುಂಬಿದೆ ಬೆಟ್ಟದೊರೆಗಳ ಝುಂಕೃತಿ ;
ಇತ್ತ ತೀರ್ಥಾಶ್ರಮವು ಗಿರಿಯಿದು ನದಿಯು ಮೇಣ್ ತೆಮರಡವಿಯುಂ
ಸುತ್ತ ಪರಿಚಿತಭೂಪ್ರದೇಶವೆ ಕಾಂಬುದಿಂತಿದು ದಂಡಕಂ. ೧೪

ಶಂಬೂಕ—ಇದು ದಂಡಕವೇ ನಿಜ. ಇಲ್ಲಿಯೇ ಮೊದಲು ವಾಸಿಸುತ್ತಿದ್ದಾಗ—

ಪದಿನಾಲ್ಕು ಸಾವಿರದ ಮೇಲೆ ಪದಿನಾಲ್ಕಾದ
ರಕ್ಕಸರು ಜತೆಗಂತೆ ಮೂವರವರು ;
ತ್ರಿಶಿರ ಖರ ದೂಷಣರು ರಣದೊಳಿದಿರಿಗೆ ಬರಲು
ದೇವನಿಂದೆಲ್ಲರೂ ಹತರಾದರು. ೧೫

ಅದರ ಫಲವಾಗಿ ಸಿದ್ಧಿಕ್ಷೇತ್ರವಾದ ಈ ಜನಸ್ಥಾನದಲ್ಲಿ ನನ್ನಂತಹ ಹಳ್ಳಿಗರೂ ಭಯವಿಲ್ಲದೆ ನಡೆದಾಡುವಂತಾಯಿತು.

ರಾಮ—ಏನು ? ಇದು ದಂಡಕಾರಣ್ಯವಷ್ಟೇ ಅಲ್ಲ ; ಜನಸ್ಥಾನವೂ ಆಗಿದೆಯೆ ?

ಶಂಬೂಕ—ಹೌದು. ಸರ್ವಪ್ರಾಣಿಗಳಿಗೂ ವೈನವಿರೇಳಿಸುವ, ಮತ್ತು ಭೀಕರ ವನಮೃಗಗಳಿಂದ ತುಂಬಿದ ಗಿರಿಗಹ್ವರಗಳ, ಜನಸ್ಥಾನದ ದಂಡೆಯ ವರೆಗೂ ದೀರ್ಘವಾಗಿ ಹಬ್ಬಿರುವ, ಈ ಅರಣ್ಯಗಳು ದಕ್ಷಿಣಾಭಿಮುಖವಾಗಿ ಹರಡಿಕೊಂಡಿವೆ ; ನೋಡು ಇಲ್ಲಿ—

ನಿಷ್ಕೂಜಸ್ತಿಮಿತಂ ದಲೊರ್ಮೆ ಬಳಿಕಂ ಪ್ರೋಚ್ಚಂಡಸತ್ವಸ್ವನಂ,
ಸ್ವೇಚ್ಛಾಸುಪ್ತ ಗಭೀರ ಭೋಗ ಭುಜಗ ಶ್ವಾಸ ಪ್ರದೀಪ್ತಾನಲಂ ;
ಸೀಮಾಗರ್ತದೊಳಲ್ಪಮಾಗೆ ತಿಳಿನೀರ್ ಬಾಯಾರಿದೀ ಪಲ್ಲಿಗಳ್
ತಾಮೀಂಟಿರ್ಪುವು ಬಾಯ್ಗಳಿಂದಜಗರಸ್ವೇದಂಗಳಂ ವಿಸ್ಮಯಂ. ೧೬

ರಾಮ—

ನೆನಪಾಯ್ತು ಜನಸ್ಥಾನಂ,
ನೋಡಲ್ಕಂದು ಖರಾಲಯಂ ;
ಪ್ರತ್ಯಕ್ಷಮೆನಿಪಂತೀಗಳ್
ಪೂರ್ವವೃತ್ತಗಳಿರ್ಪುವಯ್. ೧೭

(ಸುತ್ತಲೂ ನೋಡಿ)—ಆರಾಮುಗಳೆಂದರೆ ಸೀತೆಗೆ ಯಾವಾಗಲೂ ಪ್ರಾಣ. ಇವಂತೂ ಆ ವನಗಳೇ. ಇದಕ್ಕಿಂತ ಭಯಾನಕವಾದುದು ನನಗೆ ಉಂಟೆ ? (ಕಣ್ಣೀರು ಬಿಡುತ್ತ)

ನಿನ್ನಯ ಸಂಗಡ ವಾಸಂಗೈವೆನು
ಸುಮಧುರ ಗಂಧದ ವನಗಳಲಿ,
ಎಂದೀ ಸಂತಸದಿಂದಲೆ ಇರ್ದಳು;
ಆಕೆಯ ಪ್ರೇಮವೆ ಅಂತಹುದು. ೧೮

ಪ್ರಿಯಜನವೇನಂ ಗೈಯದೆ ಇರ್ದೊಡ-
ಮೋಡಿಸುವನು ಸಂಕಷ್ಟಗಳ;
ಸೌಖ್ಯವನೀವನು, ಪ್ರಿಯಜನದಿರ್ಕೆಯೆ
ಮನುಜಗಮೂಲ್ಯ ಮಹಾಧನವು. ೧೯

ಶಂಬೂಕ—ಈ ದುಸ್ಸಹವಾದ ನೆನಪುಗಳನ್ನು ಅಲ್ಲಿಗೇ ಬಿಟ್ಟು, ಈ ಕಡೆ ಪ್ರಶಾಂತ-ಗಂಭೀರವಾದ ಮಧ್ಯಾರಣ್ಯವನ್ನು ಮಹಾಭಾಗನು ನೋಡಬೇಕು. ಇಲ್ಲಿ ಬೆಟ್ಟಗಳ ಬಣ್ಣ ಕೊರಳೆತ್ತಿ ಹಾಡುವ ಮತ್ತ ಮಯೂರಗಳ ಕತ್ತಿನ ಸೊಬಗನ್ನು ತಳೆದಿದೆ; ಇಲ್ಲಿ ಅವಿರಳವಾಗಿ ತಣ್ಣೆಳಲನ್ನು ಕೊಡುವ ಗಿಡಬಳ್ಳಿಗಳು ಅಲಂಕಾರಪ್ರಾಯವಾಗಿವೆ; ಇಲ್ಲಿ ವಿವಿಧ ಮೃಗಯೂಥಗಳು ಭಯವಿಲ್ಲದೆ ಸಂಚರಿಸುತ್ತಿವೆ—

ಇಲ್ಲಿ ನೀರ್ವಕ್ಕಿಗಳು ಸುರಿಸಿದ ಬೆತ್ತದೊತ್ತಿನ ಕಣಗಳು
ತರಲು ಕಂಪನು ತಿಳಿಯ ನೀರಿನ ಬೆಟ್ಟದೊರೆಗಳು ಹರಿವುವು;
ಕಳಿತ ಹಣ್ಣುಗಳಿಂದ ಕಪ್ಪಗೆ ಕಾಂಬ ನೇರಿಳೆ ಮೆಳೆಗಳು
ತಡೆಯೆ, ನೀರ್ಗಳು ಮೊರೆದು ಅಪ್ಪಳಿಸುತ್ತೆ ಮಾರ್ದನಿಗೈವುವು. ೨೦

ಅದೂ ಅಲ್ಲದೆ—

ಗಂಡುಗರಡಿಗಳಿಲ್ಲಿ ಗವಿಯೊಳು ಘೀಳಿಡುತ್ತಿರೆ ದನಿಗಳು
ಮರಳಿ ಮಾರ್ದನಿಗೊಂಡು ವೆಗ್ಗಳಿಸಿರ್ಪವೆತ್ತಲು ಬನದೊಳು;
ಆನೆಯೊಯ್ಯನೆ ಮುರಿಯೆ ಶಲ್ಲಕಿಯೆಂಬ ಬಳ್ಳಿಯ ಕಾವನು,
ಸುರಿವ ಸೊಗಡಿನ ಶೀತರಸದೀ ಕಂಪು ಮೇಣ್ ಮಿಗಿಲಾದುದು. ೨೧

ರಾಮ (ಕಣ್ಣೀರನ್ನು ತಡೆದುಕೊಂಡು)—ಪುಣ್ಯಶಾಲಿಯೆ, ನಿನ್ನ ದೇವಲೋಕದ ಪ್ರಯಾಣವು ಸುಖವಾಗಿ ಸಾಗಲಿ, ಪುಣ್ಯಲೋಕಗಳಲ್ಲಿ ಐಕ್ಯನಾಗು.

ಶಂಬೂಕ—ಪುರಾತನ ಬ್ರಹ್ಮವಾದಿಯಾದ ಅಗಸ್ತ್ಯಋಷಿಯನ್ನು ಅಭಿವಂದಿಸಿ ಅನಂತರ ಶಾಶ್ವತ ಪದವಿಯನ್ನು ಪಡೆಯುವೆನು. (ನಿಷ್ಕ್ರಮ)

ರಾಮ— ಈ ಬನವೆ ಮತ್ತಿಂದು ಏಕೆ ಕಂಡುದೊ ಕಾಣೆ,
ವಾಸಗೈದೆವು ಮುನ್ನ ಚಿರಕಾಲವಿಲ್ಲಿ ;
ಆರಣ್ಯಕರು ಮತ್ತೆ ಧರ್ಮರತ ಗೃಹಿಗಳೆನೆ
ಸಂಸಾರಸುಖಗಳನು ಸವಿಯುತಂದು. ೨೨

ನವಿಲ ದನಿಗಳು ಮೊಳಗುತಿರುವೀ ಗಿರಿಗಳವುಗಳೆ ನಿರುತವು,
ಮದಿಸಿ ಜಿಂಕೆಗಳಾಡುತಿರುವೀ ಬನದೆಡೆಗಳಾ ಎಡೆಗಳು ;
ಮಂಜು ವಂಜುಲ ಲತೆಯ ಪುಂಜವಿದಾದುದಂದಿನ ಲತೆಯೆನೆ,
ತೊರೆಯ ತಡಿಗಳು ಪಾಚಿ ಹಾವಸೆಯಿರಲು ಅವುಗಳೆ ಎನಿಪವು. ೨೩

ಮೇಘದ ಮಾಲೆಯೆನಲ್ ಮಿರುಮಿರುಗುವ,
ಹತ್ತಿರವಿರ್ದವೊಲೆನ್ನಿಸುವ ;
ಗಿರಿಯಿದು ಪ್ರಸ್ರವಣಂ ಗಡ ಇಲ್ಲಿಯೆ
ನದಿ ಗೋದಾವರಿ ಕಾಣುವುದು. ೨೪

ಇದರ ಎತ್ತರವಾದ ಶಿಖರದೆ ಗೃಧ್ರರಾಜನು ವಾಸಗೈದಿರೆ
ಅದರ ಕೆಳಗಡೆ ನಾವೆ ಇದ್ದೆವು ಪರ್ಣಕುಟಿಗಳಲಿ
ನದಿಯು ಗೋದಾವರಿಯು ನೀರೊಳು ಪುದಿಯೆ ಮರಗಳ ಕೃಷ್ಣವರ್ಣವು
ಮುದದೆ ಕೂಗುವ ಪಕ್ಕಿಯುಲಿಯಿಂ ರಮ್ಯ ಬನವಾಯ್ತು. ೨೫

ಆದ್ದರಿಂದ ಆ ಪಂಚವಟಿಯೂ ಇಲ್ಲಿಯೇ ಇರಬೇಕು. ಬಹುಕಾಲ ನಾವಿಲ್ಲಿ ವಾಸಮಾಡಿದ್ದರಿಂದ, ನಮ್ಮ ರಹಸ್ಯಲೀಲಾಪ್ರಸಂಗಗಳಿಗೆಲ್ಲ ಈ ಪ್ರದೇಶಗಳೇ ಸಾಕ್ಷಿಗಳಾಗಿದ್ದುವು. ಪ್ರಿಯತಮೆಯ ಪ್ರಿಯಸಖಿಯಾದ ವಾಸಂತಿಯೆಂಬ ವನದೇವತೆಯೂ ಇಲ್ಲೇ ಇರಬೇಕು. ಈಗ ರಾಮನಿಗೆ ಏನು ಅನರ್ಥವೊದಗಿತು ! ಈಗೆಂದರೆ—

ಚಿರಕೆ ವೇಗಂಬೆತ್ತು ಹಬ್ಬಿದ ತೀವ್ರವಿಷದಾ ರಸವೆನೆ,
ಹೊರಗಿನಿಂದಲ್ಲಾಡಿಸುತ್ತಿಹ ಶಲ್ಯಶಕಲವಿದೆಂದೆನೆ,
ಮಾಂಸ ಮುಚ್ಚಿದ ವ್ರಣವು ಹೃದಯದ ಮರ್ಮದಲ್ಲೊಡೆದಿತ್ತೆನೆ,
ಹೆಪ್ಪುಗಟ್ಟಿದ ಶೋಕವೆನ್ನನು ಮತ್ತೆ ಕವಿವುದು ಪೊಸತೆನೆ. ೨೬

ಆದರೂ ಪೂರ್ವದ ಕೆಳೆಯರಾದ ಭೂಪ್ರದೇಶಗಳನ್ನು ನೋಡಬೇಕು.

(ನೋಡಿ) ವಸ್ತುಗಳ ಸನ್ನಿವೇಶವು ಎಷ್ಟು ಬದಲಾಗಿದೆ! ಹೇಗೆಂದರೆ—

ಮುಂಚೆ ತೊರೆಗಳ ನೀರು ಹರಿದೆಡೆಯೀಗ ತುಂಬಿದೆ ಪುಳಿಲಿದು,
ಭೂರುಹಂಗಳ ನಿಬಿಡ-ವಿರಲತೆಯಲ್ಲಿ ಬಂದಿದೆ ಭೇದವು ;
ಬಹಳ ಕಾಲಕೆ ಕಂಡ ಬನವಿದು ಬೇರೆಯೆಂದೇ ಎನಿಪುದು,
ಗಿರಿಗಳಿರ್ಕೆಯು ಮಾತ್ರ ಅದೆಯಿದುಯೆಂಬ ಬುದ್ಧಿಯನೊತ್ತಿತು. ೨೭

ಆಹಾ, ನಾನು ಎಷ್ಟೇ ತಪ್ಪಿಸಲೆಳಸಿದರೂ, ಪಂಚವಟೀಪ್ರೇಮ ನನ್ನನ್ನು ಬಲಾತ್ಕರಿಸಿ ಸೆಳೆಯುವಂತಿದೆ. (ದೈನ್ಯದಿಂದ)

ಎಲ್ಲಿ ಆಕೆಯ ಜತೆಗೆ ಮನೆಯೊಳಗಿರ್ದವೋಲ್ ದಿನಗಳೆದೆನೋ,
ಏನ ಕುರಿತೇ ಮಾತುಕಥೆಗಳನಾಡುತಿರ್ದೆವೊ ಸತತವು ;
ಅದನೆ ನಾಶಂಗೈದು ಸತಿಯನು ರಾಮನೊರ್ವನದೆಂತು ತಾಂ
ಪಾಪಿ ನೋಳ್ಪನೊ ಪಂಚವಟಿಯನು ಇಂದು ನೋಡದೆ ಪೋಪನೋ. ೨೮

(ಪ್ರವೇಶ)

ಶಂಬೂಕ—ದೇವನಿಗೆ ಜಯವಾಗಲಿ. ನನ್ನಿಂದ ತಮ್ಮ ಆಗಮನವನ್ನು ತಿಳಿದ ಭಗವಾನ್ ಅಗಸ್ತ್ಯನು ಹೀಗೆ ಹೇಳಿಕಳುಹಿಸಿದ್ದಾನೆ—'ವಿಮಾನವನ್ನಿಳಿದ ಕೂಡಲೆ ನಿನ್ನ ಸ್ವಾಗತಕ್ಕಾಗಿ ವತ್ಸಲೆಯಾದ ಲೋಪಾಮುದ್ರೆಯೂ ಎಲ್ಲಾ ಮಹರ್ಷಿಗಳೂ ಕಾಯುತ್ತಿದ್ದಾರೆ. ಆದ್ದರಿಂದ ಬಂದು ನಮ್ಮನ್ನು ಸನ್ಮಾನಿಸಬೇಕು. ಆಮೇಲೆ ನಿನ್ನ ವೇಗವಾದ ಪುಷ್ಪಕದಲ್ಲಿ ಕುಳಿತು ಸ್ವಸ್ಥಾನವನ್ನು ಸಕಾಲದಲ್ಲಿ ಸೇರಿ ಅಶ್ವಮೇಧಯಾಗಕ್ಕೆ ಸಿದ್ಧನಾಗ ಬಹುದು.'

ರಾಮ—ಮಹರ್ಷಿಯ ಅಪ್ಪಣೆ.

ಶಂಬೂಕ—ಇತ್ತ ಕಡೆ ದೇವನು ಪುಷ್ಪಕವನ್ನು ನಡೆಸಬೇಕು.

ರಾಮ—(ಪುಷ್ಪಕವನ್ನು ನಡೆಸುತ್ತ)—ಭಗವತಿ ಪಂಚವಟಿ, ಗುರುಜನರ ಆಜ್ಞೆಯಿಂದ ಸಂಭವಿಸಿದ ರಾಮನ ಅತಿಕ್ರಮವನ್ನು ಒಂದು ಕ್ಷಣ ಕ್ಷಮಿಸು.

ಶಂಬೂಕ—ದೇವ, ನೋಡು. ಇದು—

ಗುಂಜತ್ ಕುಂಜ ಕುಟೀರ ಘೂಕಗಣದಾ ಘೂತ್ಕಾರದಿಂ, ಪೆರ್ಬಿದಿರ್
ಸೀಳ್ವಾಡಂಬರ ಮೂಕ ಕಾಕ ನಿವಹಂ ಕ್ರೌಂಚಾವತಂ ಪರ್ವತಂ

ಭ್ರಾಮ್ಯತ್ ಧೀರಮಯೂರಕೂಜಿತಗಳಿಂ ಭೀತಂಗಳೀ ಪಾವುಗಳ್.
ಪ್ರಾಚೀನದ್ರುಮಶಾಖೆಯೊಳ್ ಸುರುಳಿಯಿಂ ಸುತ್ತಿರ್ಪುವೀಗಳ್ ದಿಟಂ

ಅಲ್ಲದೆ, ಇವು

ಗವಿಗಳೊಳಗಡೆ ಜುಳುಜುಳೆನ್ನುತೆ ಉರುಳೆ ಗೋದಾವರಿಯ ನೀರ್,
ಮೋಡ ತುದಿಯನು ಮುಸುಕೆ ನೀಲದ ಶಿಖರವೆಸೆಯುವ ಗಿರಿಗಳು,
ಒಂದಕೊಂದಕೆ ಹೊಡೆದು ಮೂಡುವ ಪಿರಿಯ ಬೊಬ್ಬುಳಿಯುಬ್ಬರ
ತೀವಿದಿವುಗಳೆ ಮತ್ತೆ ಆಳದ ಪುಣ್ಯನದಿಗಳ ಸಂಗಮ. ೩೦

ಇಲ್ಲಿಗೆ 'ಪಂಚವಟೀಪ್ರವೇಶ'ವೆಂಬ ಎರಡನೆಯ ಅಂಕ ಮುಗಿದುದು.

---

# ಮೂರನೆಯ ಅಂಕ

(ಎರಡು ನದಿಗಳ ಪ್ರವೇಶ)

ತಮಸೆ—ಸಖಿ ಮುರಲೆ, ಇದೇಕೆ ಗಾಬರಿಯಾಗಿರುವೆ?

ಮುರಲೆ—ಸಖಿ ತಮಸೆ, ಭಗವಾನ್ ಅಗಸ್ತ್ಯನ ಪತ್ನಿ ಲೋಪಾಮುದ್ರೆ ಮಹಾನದಿಯಾದ ಗೋದಾವರಿಗೆ ಹೀಗೆ ಹೇಳಬೇಕೆಂದು ನನ್ನನ್ನು ಕಳುಹಿಸಿದ್ದಾಳೆ:— 'ನಿನಗೆ ಗೊತ್ತೇ ಇದೆ; ವಧುವನ್ನು ಪರಿತ್ಯಾಗ ಮಾಡಿದ ಕ್ಷಣದಿಂದಲೂ,

ಬಹುಗಭೀರತೆಯಿಂದೆ ಆತನ
ಹೊರಗೆ ತೋರದೆ ಇರ್ದೊಡಂ;
ಒಳಗೆ ತಳಮಳಿಸಿರ್ಪ ಬೇಗೆಯು
ಮುಚ್ಚಿ ಮರೆಯೊಳು ಹೆಚ್ಚಿದೆ;
ರಾಮಭದ್ರನ ಕರುಣರಸವದು
ಎಲ್ಲ ಪರಿಯೊಳು ಪೋಲ್ವುದು,
ಪುಟಕೆ ಹಾಕಲು ಪಾಕವಾಗುತೆ
ಒಳಗೆ ಕುದಿವೌಷಧಿಯನು. ೧

ಇಷ್ಟಜನಕ್ಕೆ ಬಂದೊದಗಿದ ಆ ಪರಿಯ ಕಷ್ಟದಿಂದ, ಪ್ರಕೃಷ್ಟವಾದ ದೀರ್ಘಶೋಕಸಂತಾನವೇ ಸಂಜನಿಸಿ, ರಾಮಭದ್ರನೀಗ ಬಹಳವಾಗಿ ಕ್ಷೀಣನಾಗಿದ್ದಾನೆ. ಅವನನ್ನು ನೋಡಿದೊಡನೆ ನನ್ನ ಹೃದಯದ ನರ ಗಳೇ ಕಂಪಿಸಿದಂತಾಯಿತು. ಈಗ ರಾಮಭದ್ರನು ಹಿಂದಿರುಗುವಾಗ ತಪ್ಪದೆ ಪಂಚವಟೀವನದಲ್ಲಿ ಪ್ರಿಯಾಸಹವಾಸಕಾಲದ ಪ್ರೇಮಸಾಕ್ಷಿ ಗಳಾದ ಪ್ರದೇಶಗಳನ್ನು ನೋಡಬೇಕಾಗಿದೆ. ರಾಮಭದ್ರನು ಸ್ವಭಾವತಃ ಧೀರನಾದರೂ, ಇಂದಿನ ಸ್ಥಿತಿಯಲ್ಲಿ ತೀವ್ರತರವಾದ ಶೋಕ, ಕ್ಷೋಭ, ಉದ್ವೇಗಗಳಿಗೆ ಪರವಶನಾಗಬಹುದು; ಹೆಜ್ಜೆ ಹೆಜ್ಜೆಗೂ ದೊಡ್ಡ ಪ್ರಮಾದ ಗಳೇ ಸಂಭವಿಸಬಹುದು. ಆದ್ದರಿಂದ, ಭಗವತಿ ಗೋದಾವರಿ, ನೀನು ಸಾವಧಾನಳಾಗಿರಬೇಕು.

ಪದ್ಮದೆಸಳಿನ ಕಂಪ ಬರಸೆಳೆದು ಮುಂಬರಿವ,
ನಿನ್ನಲೆಯ ಮೇಲ್ವಾಯ್ವ ತೆಂಬೆಲರನು;

ಮೆಲ್ಲಮೆಲ್ಲನೆ ಬೀಸಿ ಮುಚ್ಛೆ ವೋದಾಗೆಲ್ಲ
ರಾಮಜೀವವನಿಂದು ತಣಿಸು ನೀನು. ೨

ತಮಸೆ—ಇದು ಸ್ನೇಹಕ್ಕೆ ಒಪ್ಪುವ ದಾಕ್ಷಿಣ್ಯ. ರಾಮನನ್ನು ಉಜ್ಜೀವಿಸಲು ಎಲ್ಲಕ್ಕೂ ಹೆಚ್ಚಿನದಾದ ಉಪಾಯವೂ ಕೂಡ ಇಂದು ಸಮೀಪವರ್ತಿಯಾಗಿಯೇ ಇದೆ.

ಮುರಲಿ—ಅದೇನು ?

ತಮಸೆ—ಕೇಳು. ಹಿಂದೆ, ವಾಲ್ಮೀಕಿಗಳ ತಪೋವನದಲ್ಲಿ ಸೀತೆಯನ್ನು ಬಿಟ್ಟು ಲಕ್ಷ್ಮಣನು ಹೊರಟುಹೋದಮೇಲೆ, ಸೀತಾದೇವಿಗೆ ಪ್ರಸವವೇದನೆಯೊದಗಿತು. ದುಃಖವೇಗವನ್ನು ತಾಳಲಾರದೆ ಆಕೆ ಗಂಗಾಪ್ರವಾಹದಲ್ಲಿ ಹೋಗಿ ಬಿದ್ದುಬಿಟ್ಟಳು. ಆ ಕ್ಷಣವೇ ಎರಡು ಗಂಡುಶಿಶುಗಳನ್ನೂ ಹಡೆದಳು. ದೇವಿಯರಾದ ಪೃಥ್ವಿಯೂ ಭಾಗೀರಥಿಯೂ ಆಕೆಯನ್ನು ಸಂತೈಸಿ ರಸಾತಳಕ್ಕೆ ಕರೆದುಕೊಂಡು ಹೋದರು. ಸ್ತನ್ಯಪಾನವನ್ನು ಶಿಶುಗಳು ಬಿಟ್ಟೊಡನೆ ಅವೆರಡನ್ನೂ ಸ್ವಯಂ ಗಂಗಾದೇವಿಯೇ ವಾಲ್ಮೀಕಿ ಮಹರ್ಷಿಗೆ ಒಪ್ಪಿಸಿಕೊಟ್ಟು ಬಂದಳು.

ಮುರಲಿ (ಆಶ್ಚರ್ಯದಿಂದ)— ಇಂಥ ಸುಜನದ ದುರ್ವಿಪಾಕವು
ಕೂಡ ವಿಸ್ಮಯಜನಕವು ;
ಇಂಥ ದೇವಿಯರಲ್ಲದಿರ್ದೊಡೆ
ನೆರವ ನೀಡುತಲಿರ್ದರೇ ? ೩

ತಮಸೆ—ಈಗ ಈ ಶಂಬೂಕನ ವಧೆಗಾಗಿ ರಾಮಭದ್ರನು ಜನಸ್ಥಾನಕ್ಕೆ ಆಗಮಿಸಬಹುದೆಂಬುದು ಸರಯೂನದಿಯ ಮುಖಾಂತರ ಭಾಗೀರಥಿಗೆ ತಿಳಿಯಿತು. ತಿಳಿದೊಡನೆಯೇ ಲೋಪಾಮುದ್ರೆ ಸ್ನೇಹದಿಂದ ಶಂಕಿಸಿದ್ದನ್ನೇ ಆಕೆಯೂ ಶಂಕಿಸಿದಳು. ಗೋದಾವರಿಯನ್ನು ನೋಡಬೇಕಾದದ್ದು ತನ್ನ ಮನೆಯ ಆಚಾರವೆಂದು ನೆವ ಹೇಳಿ ಸೀತೆಯನ್ನು ಕರೆದುಕೊಂಡಿಲ್ಲಿ ಬಂದಿದ್ದಾಳೆ.

ಮುರಲಿ—ಭಗವತಿ ಭಾಗೀರಥಿ ಯೋಚಿಸಿದ್ದು ಸರಿಯಾಗಿದೆ. ರಾಮಭದ್ರನು ರಾಜಧಾನಿಯಲ್ಲಿ ಬೇರೆ ಬೇರೆ ಜಗದಭ್ಯುದಯಕಾರ್ಯಗಳಲ್ಲಿ ವ್ಯಗ್ರನಾಗಿರುವಾಗ ಚಿತ್ತವಿಕಾರಗಳೆಲ್ಲವನ್ನೂ ತಡೆದುಹಿಡಿದಿರುತ್ತಾನೆ. ಆದರೆ ಹಾಗೆ ವ್ಯಗ್ರನಲ್ಲದಿರುವ ಆತನು ಶೋಕವೆಂಬ ಏಕಮಾತ್ರ ಸಹಚರನೊಡನೆ ಪಂಚವಟಿಯನ್ನು ಪ್ರವೇಶಿಸುವುದೆಂದರೆ ದೊಡ್ಡ ಅನರ್ಥವೇ ಸರಿ. ಆದರೆ, ಈಗ ಸೀತಾದೇವಿ ರಾಮಭದ್ರನನ್ನು ಹೇಗೆ ಸಂತೈಸಬೇಕು ?

ತಮಸೆ—ಈ ಕುರಿತು ಭಾಗೀರಥಿ ಹೇಳಿದ್ದಾಳೆ—'ವತ್ಸೆ, ದೇವಯಜನ ಸಂಭವೆ, ಇಂದು ಚಿರಂಜೀವಿಗಳಾದ ಕುಶಲವರ ಹನ್ನೆರಡನೆಯ ಹುಟ್ಟು ಹಬ್ಬದ ನಿಮಿತ್ತ ಅವರ ವಯಸ್ಸಿನಷ್ಟು ಮಂಗಲಗ್ರಂಥಿಗಳನ್ನು ಹಾಕುವ ಶುಭಕಾರ್ಯವು ನಡೆಯಬೇಕಾಗಿದೆ. ಆದ್ದರಿಂದ ಇವತ್ತು ನಿನ್ನ ಕೈಯಿಂದಲೇ ಹೂಗಳನ್ನು ಕೊಯ್ದುತಂದು ನಿನ್ನ ಪುರಾತನ ಮಾವನೂ, ಮನುವೇ ಮೊದಲಾದ ರಾಜರ್ಷಿವಂಶಕ್ಕೆಲ್ಲ ಮೂಲಪುರುಷನೂ, ಪಾಪ ನಾಶಕನೂ ಆದ ಸೂರ್ಯದೇವನನ್ನು ಆರಾಧಿಸು. ನೀನು ಭೂತಲದಲ್ಲಿ ನಡೆ ಯುತ್ತಿದ್ದರೂ ನನ್ನ ಮಹಿಮೆಯಿಂದ ವನದೇವತೆಗಳು ಸಹ ನಿನ್ನನ್ನು ನೋಡಲಾರರು; ಇನ್ನು ಮನುಷ್ಯರ ಮಾತೇನು?' ಎಂಬುದಾಗಿ. ನನಗೂ ಹೀಗೆ ಅಪ್ಪಣೆ ಮಾಡಿದ್ದಾಳೆ—'ತಮಸೇ, ವಧು ಜಾನಕಿಗೆ ನೀನೆಂದರೆ ಬಹಳ ಪ್ರೇಮ. ಆದ್ದರಿಂದ ನೀನೇ ಅವಳ ಬಳಿಯಲ್ಲಿರು' ಎಂದು. ನಾನು ಈಗ ಅಪ್ಪಣೆಯಂತೆ ನಡೆದುಕೊಳ್ಳುತ್ತೇನೆ.

ಮುರಲೆ—ನಾನೂ ಕೂಡ ಈ ವೃತ್ತಾಂತವನ್ನು ಭಗವತಿ ಲೋಪಾಮುದ್ರೆಗೆ ಬಿನ್ನವಿಸುತ್ತೇನೆ. ರಾಮಭದ್ರನು ಬಂದೇಬಿಟ್ಟನೆಂದು ಕಾಣುತ್ತದೆ.

ತಮಸೆ—ಇಗೋ ಗೋದಾವರಿಯ ಮಡುವಿನಿಂದ ಎದ್ದ ಜಾನಕಿ—

ಬಿಳಿಚಿ ಬಳಲಿದ ಕೆನ್ನೆಯಿಂ,<br>
ಕೆದರಿಕೊಂಡಿಹ ಹೆರಳಿನಿಂ,<br>
ಮೊಗವು ಸೊಬಗನೆ ಸೂಸಿರೆ;<br>
ಕರುಣೆ ಮೂರ್ತಿಗೊಂಡುದೋ,<br>
ವಿರಹವೇ ಮೈತಳೆದುದೋ,<br>
ಎನಲು ಬನಕೆ ಬರುವಳು. ೪

ಮುರಲೆ—ಇವಳ ಸ್ಥಿತಿಯೆಂದರೆ—

ಗಿಡದ ತೊಟ್ಟನೆ ಕೊಯ್ಯೆ ಬಾಡುವ ತಳಿರೆಸಲ್ ನಳನಳಿಸುವ,<br>
ಹೃದಯಕುಸುಮವ ಬಾಡಿಸುತ್ತೀ ದೀರ್ಘಶೋಕವು ದಾರುಣ;<br>
ಬಿಳಿಚಿ ಸೊರಗಿರುವೀಕೆಯೊಡಲನು ಮತ್ತೆ ಬೇಯಿಸುತಿರ್ಪುದು,<br>
ಶರದ ಕಾಲದ ಬಿಸಿಲು ನೋಯಿಸುವಂತೆ ಕೇದಗೆಯೆಸಳನು. ೫

(ನಿಷ್ಕ್ರಮ—ಇಬ್ಬರೂ)

**ಇದು ಶುದ್ಧ—ವಿಷ್ಕಂಭಕ**

(ತೆರೆಯಲ್ಲಿ)

ಪ್ರಮಾದ! ಪ್ರಮಾದ!

(ಪ್ರವೇಶ: ಹೂಕೊಯ್ಯುತ್ತಿರುವ ಸೀತೆ, ಕರುಣ, ಔತ್ಸುಕ್ಯಗಳಿಂದ ಕೇಳುತ್ತಿರುವಳು.)

ಸೀತೆ—ಓ, ನನ್ನ ಪ್ರಿಯ ಸಖಿ ವಾಸಂತಿಯೇ ಮಾತನಾಡುವಂತಿದೆ.

(ಮತ್ತೆ ತೆರೆಯಲ್ಲಿ)

ಸೀತೆ ತನ್ನಯ ಕೈಗಳಿಂದಲೆ ಕೊಯ್ದು 'ಸಲ್ಲಕಿ' ತಳಿರ್ಗಳಂ,
ಆವ ಆನೆಯ ಮರಿಯ ನಲಿಯಿಸಿ ಸಾಕಿ ಸಲಹುತೆ ಪೊರೆದಳೋ;

ಸೀತೆ—ಅದಕ್ಕೆ ಏನಾಯಿತು?

(ಮತ್ತೆ ತೆರೆಯಲ್ಲಿ)

ಪಿಡಿಯ ಜತೆಯಲಿ ನೀರೊಳಾಡುತ್ತಿರಲು ಭರದಿಂದೊಯ್ಯನೆ
ಅದನೆ ದರ್ಪದೆ ಮದಿಸಿದಾನೆಯು ಬಂದು ಸೆಣಸಿದೆಯಕ್ಕಟಾ! ೭

ಸೀತೆ (ಗಾಬರಿಯಿಂದ ಕೆಲವು ಹೆಜ್ಜೆ ನಡೆದು)—ಆರ್ಯಪುತ್ರ, ನನ್ನ ಆ ಕಂದನನ್ನು ಕಾಪಾಡು, ಕಾಪಾಡು! (ಸ್ಮರಿಸಿಕೊಂಡು ದುಃಖದಿಂದ) ಅಯ್ಯೋ, ಕಷ್ಟ; ಕಷ್ಟ! ಪಂಚವಟಿಯನ್ನು ನೋಡಿ ಮಂದಭಾಗಿನಿಯಾದ ನನಗೆ ಹಿಂದಿನ ಆ ಮಾತುಗಳೇ ಬಾಯಲ್ಲಿ ಬರುತ್ತಿವೆ. ಅಯ್ಯೋ, ಆರ್ಯಪುತ್ರ! (ಮೂರ್ಛೆ ಹೋಗುವಳು).

(ಪ್ರವೇಶ)

ತಮಸೆ—ವತ್ಸೆ, ಸಂತೈಸಿಕೊ, ಸಂತೈಸಿಕೊ.

(ತೆರೆಯಲ್ಲಿ)

ವಿಮಾನರಾಜ, ಇಲ್ಲಿಯೇ ನಿಲ್ಲು.

ಸೀತೆ (ಶಾಂತಳಾಗಿ ಭಯ, ಉಲ್ಲಾಸಗಳಿಂದ)—ಅಹಾ, ನೀರಿನ ಭಾರದಿಂದ ತುಂಬಿದ ಮೋಡದ ಮಂದವಾದ ಗುಡುಗಿನಂತೆ ಗಂಭೀರವೂ ನಾದಮಯವೂ ಆದ ಈ ಸ್ವರದ ಘೋಷ ಎಲ್ಲಿಂದ ಬರುತ್ತಿದೆ! ಇದು ಕಿವಿಗಳಲ್ಲಿ ತುಂಬಿದೊಡನೆ ಮಂದಭಾಗಿನಿಯಾದ ನನ್ನನ್ನು ಕೂಡ ಪರವಶಗೈಯ್ಯುತ್ತಿದೆ!

ತಮಸೆ (ಸ್ನೇಹಬಾಷ್ಪದಿಂದ)—ವತ್ಸೆ,

ಗುಡುಗಿಗೆ ಬೆದರುವ ಪೆಣ್ಣವಿಲಂತೆ
ಅಂಜುತೆ ಅಳ್ಕುತೆ ನೀಂ ನಿಂತೆ;
ಕೇಳಲ್ಕೊಡನೆಯೆ ದೂರದೊಳೆಲ್ಲಿಯೊ
ಅಸ್ಫುಟವೆನಿಸುವ ದನಿಯನ್ನು. ೭

ಸೀತೆ—ಭಗವತಿ, ಅಸ್ಫುಟವೆಂದೇಕೆ ಹೇಳುವೆ? ಆರ್ಯಪುತ್ರನೇ ಇದನ್ನು ಆಡಿರುವನೆಂಬುದು ನನಗೆ ಸ್ವರಸಂಯೋಗದಿಂದಲೇ ಗೊತ್ತು.

ತಮಸೆ—ನಾನೂ ಕೇಳಿದ್ದೇನೆ—ತಪಗೈಯುತ್ತಿರುವ ಶೂದ್ರನ ದಂಡನೆಗಾಗಿ ಇಕ್ಷ್ವಾಕು ವಂಶದ ರಾಜನು ಜನಸ್ಥಾನಕ್ಕೆ ಬಂದಿರುವನು, ಎಂದು.

ಸೀತೆ—ಆ ರಾಜನು ತನ್ನ ಧರ್ಮಕಾರ್ಯದಲ್ಲಿ ಸ್ವಲ್ಪವೂ ತಪ್ಪದಿರುವುದು ಸಂತೋಷದ ಸಂಗತಿ.

(ತೆರೆಯಲ್ಲಿ)

ಎಲ್ಲಿ ಮರಗಳು, ಮೃಗಗಳೂ ಸಹ, ನಂಟರೇ ಎನಗಾದರೋ,
ಎಲ್ಲಿ ಬಹುದಿನ ಕಾಂತೆಯೊಂದಿಗೆ ವಾಸಗೈದೆನೊ, ಅವುಗಳೇ
ಇಲ್ಲಿ ಗೋದಾವರಿಯ ತಡಿಯೊಳು ಮತ್ತೆ ಕಾಂಬವು ಗಿರಿಗಳು,
ಇಲ್ಲೆ ನಿರ್ಝರವಾರಿಯಿಳಿವುದು ಗವಿಗಳೆಡೆಯಲಿ ಭೋರೆನೆ. ೮

ಸೀತೆ (ನೋಡಿ)—ಅದೃಷ್ಟವೇ ಸರಿ, ನಿಜವಾಗಿಯೂ ಆರ್ಯಪುತ್ರನೇ. ಆದರೆ ಆಕಾರವು ಪ್ರಭಾತದ ಚಂದ್ರಮಂಡಲದಂತೆ ಬಿಳಿಚಿಕೊಂಡಿರುವುದಲ್ಲದೆ ದುರ್ಬಲವೂ ಆಗಿರುವುದರಿಂದ ಅವನ ಸೌಮ್ಯ, ಗಂಭೀರ ತೇಜದಿಂದ ಮಾತ್ರ ಗುರುತು ಸಿಕ್ಕುತ್ತದೆ. ಭಗವತಿ, ತಮಸೆ, ನನ್ನನ್ನು ಹಿಡಿದುಕೊ. (ತಮಸೆಯನ್ನಪ್ಪಿಕೊಂಡು ಮೂರ್ಛೆಹೋಗುವಳು)

ತಮಸೆ (ಹಿಡಿದುಕೊಂಡು)—ವತ್ಸೆ, ಸಂತೈಸಿಕೊ, ಸಂತೈಸಿಕೊ.

(ತೆರೆಯಲ್ಲಿ)

ಈ ಪಂಚವಟಿಯ ದರ್ಶನದಿಂದ,
ಒಳಗೆ ಅಡಗಿದ ದುಃಖದಗ್ನಿಯೆ
ಬೆಳೆದು ದಳ್ಳುರಿಯಾಗಲು;
ಹಬ್ಬಿ ಹರಡುವ ಹೊಗೆಯ ತೆರದಲಿ
ಮೋಹವೆನ್ನನು ಕವಿವುದು. ೯

ಹಾ ಪ್ರಿಯೆ, ಜಾನಕಿ!

ತಮಸೆ (ಸ್ವಗತ)—ಗುರುಜನರು ಶಂಕಿಸಿದ್ದೇ ಇದು.

ಸೀತೆ (ಸಂತೈಸಿಕೊಂಡು)—ಇದು ಹೇಗೆ?

(ಮತ್ತೆ ತೆರೆಯಲ್ಲಿ)

ಹಾ ದೇವಿ, ದಂಡಕಾರಣ್ಯವಾಸಪ್ರಿಯಸಖಿ, ವಿದೇಹರಾಜಪುತ್ರಿ!

ಸೀತೆ—ಅಯ್ಯೋ ದೈವವೆ! ಮಂದಭಾಗಿನಿಯಾದ ನನ್ನನ್ನು ನೆನೆಯುತ್ತ ನೇತ್ರೋತ್ಪಲಗಳನ್ನು ಮುಚ್ಚಿ ಮೂರ್ಛೆಹೋಗಿಬಿಟ್ಟನೇ! ಅಯ್ಯೋ, ನೆಲದ ಮೇಲೆ ಉಸಿರುಕಟ್ಟಿ ಬಿದ್ದಿರುವುದನ್ನು ತಡೆಯುವುದು ಹೇಗೆ! ಭಗವತಿ ತಮಸೆ, ಕಾಪಾಡು, ಕಾಪಾಡು. ಆರ್ಯಪುತ್ರನನ್ನು ಬದುಕಿಸು (ಎಂದು ಕಾಲಿಗೆ ಬೀಳುವಳು).

ತಮಸೆ—
ನೀನೆ ಮಂಗಳೆ ಲೋಕನಾಥನ
ಜೀವ ಬರುವಂತಾಗಿಸೌ;
ಪ್ರಿಯವು ನಿನ್ನೀ ಕೈಯ ಸೋಂಕೆನೆ,
ಅವನಿಗದರೊಳೆ ಆದರ. ೧೦

ಸೀತೆ—ಏನಾಗುವುದೋ ಆಗಿಕೊಳ್ಳಲಿ. ನಿನ್ನ ಅಪ್ಪಣೆಯಂತೆ ನಡೆಯುತ್ತೇನೆ. (ಗಾಬರಿಯಿಂದ ಎದ್ದುಹೋಗುವಳು)

(ಪ್ರವೇಶ—ನೆಲದ ಮೇಲೆ ಬಿದ್ದಿರುವ ರಾಮ; ಕಣ್ಣೀರು ಸುರಿಸುತ್ತ ಅವನನ್ನು ಸವರುತ್ತಿರುವ ಸೀತೆ; ರಾಮನು ಹರ್ಷವನ್ನು ಸೂಚಿಸುತ್ತಾನೆ.)

ಸೀತೆ (ಸ್ವಲ್ಪ ಹರ್ಷದಿಂದ)—ಮೂಜಗದ ಪ್ರಾಣ ಮರಳಿ ಬಂದಿತೆಂದು ಕಾಣುತ್ತದೆ.

ರಾಮ—ಅಹಾ, ಇದೇನಿದು?

ರಕ್ತಚಂದನ ಪಲ್ಲವಂಗಳ ರಸವನೊಸರುವ ಮಳೆಯಿದೋ?
ಚಂದ್ರಕಿರಣಗಳೆಂಬ ತಳಿರ್ಗಳ ಹಿಂಡೆ, ಸುರಿಯುವ ಸೇಕವೋ?
ಮತ್ತೆ ಸಂಜೀವನದ ಬಳ್ಳಿಯ ರಸವ ಹೃದಯಕೆ ತಳಿದರೋ?
ಕಾಣೆ ಏನೋ, ತಪ್ತಹೃದಯವ ಮತ್ತೆ ಸಂತೈಸಿರ್ಪುದು. ೧೧

ಅಷ್ಟೇ ಅಲ್ಲ—

ಪೂರ್ವಪರಿಚಿತವಾದ ಮೈಸೋಂಕದೆ ಇದಪ್ಪುದು ನಿರುತವು
ಅಸುವನುಜ್ಜೀವಿಸುವುದಂತೆಯೆ ಮನಕೆ ಮುದವನು ತರುವುದು ;
ಬಗೆಯ ಬೇಗೆಯಿನೊಗೆದ ಮೂರ್ಛೆಯನೊಡನೆ ತೊಲಗಿಸಿ ಮತ್ತಿದು
ಮನಕೆ ಪರಮಾನಂದವೀಯುತೆ ಮರಳಿ ಮೈಮರೆಸಿರ್ಪುದು. ೧೨

ಸೀತೆ (ಗಾಬರಿಯಿಂದ ನಡುಗುತ್ತ ದೂರ ಸರಿದು)—ಈಗ ಇಷ್ಟೇ ನನಗೆ ಹೆಚ್ಚಾಯಿತು.

ರಾಮ (ಕುಳಿತು)—ಪ್ರೇಮಮಯಿಯಾದ ಸೀತಾದೇವಿಯೇ ನನ್ನನ್ನು ಅನುಗ್ರಹಿಸಿರಬಹುದೇ ?

ಸೀತೆ—ಅಯ್ಯೋ, ಆರ್ಯಪುತ್ರನು ನನ್ನನ್ನು ಹುಡುಕಿಬಿಡುವನೇನೋ !

ರಾಮ—ಇರಲಿ, ಹುಡುಕಿ ನೋಡುತ್ತೇನೆ.

ಸೀತೆ—ಭಗವತಿ, ತಮಸೆ, ನಾವಿಲ್ಲಿಂದ ಹೊರಟುಹೋಗೋಣ. ಅವನ ಅಪ್ಪಣೆಯಿಲ್ಲದೆ ನಾನಿಲ್ಲಿರುವುದನ್ನು ಕಂಡರೆ ರಾಜನು ತುಂಬಾ ಸಿಟ್ಟಾಗುವನು.

ತಮಸೆ—ವತ್ಸೆ, ಭಾಗೀರಥಿಯ ವರದಿಂದ ನೀನು ವನದೇವತೆಗಳ ಕಣ್ಣಿಗೂ ಕೂಡ ಅದೃಶ್ಯಳಾಗಿರುವೆ.

ಸೀತೆ—ಹೂಂ, ಹೌದು.

ರಾಮ—ಹಾ ಪ್ರಿಯೆ, ಜಾನಕಿ.

ಸೀತೆ (ಕೋಪ ಗದ್ಗದಳಾಗಿ)—ಆರ್ಯಪುತ್ರ, ಇದು ನಿನ್ನ ವರ್ತನೆಗೆ ಉಚಿತವಾಗಿಲ್ಲ. ಅಥವಾ ನಾನೇಕೆ ಹೃದಯವನ್ನು ವಜ್ರಮಯವಾಗಿಸಿ ನಿರ್ದಯಳಾಗಲಿ ? ಮುಂದಿನ ಜನ್ಮಗಳಲ್ಲಿಯೂ ಆರ್ಯಪುತ್ರನ ದರ್ಶನ ದುರ್ಲಭವಾಗಬಹುದು ; ಮಂದಭಾಗಿನಿಯಾದ ನನ್ನನ್ನು ಪ್ರೀತಿಯಿಂದ ಈಗ ನೆನೆಯುತ್ತಲೂ ಇದ್ದಾನೆ. ನಾನು ಅವನ ಹೃದಯವನ್ನು ಬಲ್ಲೆ ; ಅವನೂ ನನ್ನ ಹೃದಯವನ್ನು ಬಲ್ಲನು.

ರಾಮ (ಸುತ್ತಲೂ ನೋಡಿ ನಿರ್ವಿಣ್ಣನಾಗಿ)—ಅಯ್ಯೋ, ಇಲ್ಲಿ ಯಾರೂ ಇಲ್ಲ.

ಸೀತೆ—ತಮಸೆ, ಹಾಗೆ ನಿಷ್ಕಾರಣವಾಗಿ ನನ್ನನ್ನು ಪರಿತ್ಯಜಿಸಿದ್ದರೂ ಈ ಸ್ಥಿತಿಯಲ್ಲಿ ಇವನನ್ನು ನೋಡಿ ನನ್ನ ಹೃದಯದ ಅವಸ್ಥೆ ಏನಾಗಿದೆಯೆಂಬುದನ್ನು ಹೇಗೆ ಹೇಳಲಿ !

ತಮಸೆ—ವತ್ಸೆ, ನಾನು ಬಲ್ಲೆ—

ಆಸೆಯುಳಿದಿರೆ ಬಿಮ್ಮನಿರ್ದುದು, ಕದಡಿತಪ್ರಿಯವೆಸಗಿರೆ,
ಚಿರದ ವಿರಹದೆ ತೆಕ್ಕನೊದಗಿದ ಕೂಟದಿಂ ಮರವಟ್ಟಿದೆ;

ತಿಳಿದುದೊಳ್ಳಿನೊಳಿನಿಯ ಕೊರಗಲು ಬಹಳ ಕೊರಗಿನೊಳದ್ದಿದೆ,
ಪ್ರೇಮದಿಂದಿದೊ ಕರಗಿ ಹೋಗಿದೆ ನಿನ್ನ ಹೃದಯವು ಚಣದೊಳು. ೧೩

ರಾಮ—ದೇವಿ,

ಇಗೋ ನಿನ್ನ ರಾಗದಲಿ ನೆನೆದು ತಣಿಸಿರ್ಪ ಮೈಯ ಸೋಂಕು
ಎನಗೆ ನೀನು ಗೈದನುಗ್ರಹವೆ ಮೈತಾಳಿ ನಿಂದುದೆನಲು ;
ಇನ್ನು ಈಗಲೂ ಎನ್ನ ಮುಳುಗಿಸಿದೆ ಮುದದ ಮಡುವಿನಲ್ಲಿ,
ಮತ್ತೆ ನೀನೆ ಆನಂದದಾಯಿನಿಯೆ ಕಾಣೆ ಪೋದೆಯೆಲ್ಲಿ. ೧೪

ಸೀತೆ—ಅಹಾ, ಆರ್ಯಪುತ್ರನ ಈ ನುಡಿಗಳು ಅವನ ಅಗಾಧವಾದ ಹೃದಯಾಂತರಾಳದಲ್ಲಿ ತುಂಬಿರುವ ಪ್ರೇಮರಾಶಿಯನ್ನು ಬಿಂಬಿಸುತ್ತವೆ. ಆನಂದವನ್ನು ಹರಿಸುತ್ತವೆ; ಅಮೃತಮಯವಾಗಿವೆ. ಇವುಗಳಲ್ಲಿ ವಿಶ್ವಾಸವಿಟ್ಟಿರುವ ನಾನು ನಿಷ್ಕಾರಣಪರಿತ್ಯಾಗವೆಂಬ ಅಂಬು ನಾಟಿದ್ದರೂ ನನ್ನ ಜನ್ಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ರಾಮ—ಅಯ್ಯೋ, ಇನ್ನೆಲ್ಲಿಯ ಪ್ರಿಯತಮೆ? ಮಿತಿಮೀರಿದ ಮನದಾಸೆಯ ಫಲವಾಗಿ ರಾಮಭದ್ರನಿಗೆ ಈ ಭ್ರಮೆ ಹಿಡಿದಿದೆ.

(ತೆರೆಯಲ್ಲಿ)

ಅಯ್ಯೋ, ಪ್ರಮಾದ! ಪ್ರಮಾದ!

ಸೀತೆ ತನ್ನಯ ಕೈಗಳಿಂದಲೆ ಕೊಯ್ದು 'ಸಲ್ಲಕಿ' ತಳಿರ್ಗಳಂ,
ಆವ ಆನೆಯ ಮರಿಯ ನಲಿಯಿಸಿ ಸಾಕಿ ಸಲಹುತೆ ಪೊರೆದಳೋ ;

ರಾಮ (ಕನಿಕರ, ಔತ್ಸುಕ್ಯಗಳಿಂದ)—ಅದಕ್ಕೆ ಏನಾಯಿತು ?

(ಮತ್ತೆ ತೆರೆಯಲ್ಲಿ)

ಪಿಡಿಯ ಜತೆಯಲಿ ನೀರೊಳಾಡುತ್ತಿರಲು ಭರದಿಂದೊಯ್ಯನೆ
ಅದನೆ ದರ್ಪದೆ ಮದಿಸಿದಾನೆಯು ಬಂದು ಸೆಣಸಿದೆಯಕ್ಕಟಾ !

ಸೀತೆ—ಈಗ ಕಾದುವವರಾರು ?

ರಾಮ—ಎಲ್ಲಿ, ಎಲ್ಲಿ, ಪ್ರಿಯತಮೆಯ ಕಂದನನ್ನು, ಮಡದಿಯೊಡನಿರುವಾಗ ಕೆಣಕುವ ದುರಾತ್ಮನೆಲ್ಲಿ? (ಎಂದು ಎದ್ದೇಳುವನು.)

(ಪ್ರವೇಶ)

ವಾಸಂತಿ (ಗಾಬರಿಯಿಂದ)—ಏನು, ದೇವ ರಘುನಂದನನೆ?

ಸೀತೆ—ಏನು, ನನ್ನ ಪ್ರಿಯಸಖಿ ವಾಸಂತಿ!

ವಾಸಂತಿ—ದೇವನಿಗೆ ಜಯವಾಗಲಿ!

ರಾಮ (ನೋಡಿ)—ಏನು, ದೇವಿಯ ಪ್ರಿಯಸಖಿ ವಾಸಂತಿಯೆ!

ವಾಸಂತಿ—ದೇವ, ತ್ವರೆಮಾಡು, ತ್ವರೆಮಾಡು. ಇಲ್ಲೇ ಜಟಾಯುಶಿಖರದ ದಕ್ಷಿಣಕ್ಕೆ ಸೀತಾತೀರ್ಥದ ಬಳಿ ಗೋದಾವರಿಗಿಳಿದು ದೇವಿಯ ಕಂದನನ್ನು ಸಂತೈಸು.

ಸೀತೆ—ಹಾ ತಾತ, ಜಟಾಯು, ನೀನಿಲ್ಲದೆ ಈ ಜನಸ್ಥಾನವೇ ಶೂನ್ಯವಾಗಿದೆ.

ರಾಮ—ಅಕಟಕಟಾ, ಈ ಮಾತುಕಥೆಗಳು ಹೃದಯ ಮರ್ಮಗಳನ್ನೇ ಕತ್ತರಿಸುತ್ತಿವೆ!

ವಾಸಂತಿ—ದೇವನು ಇತ್ತ ಬರಬೇಕು.

ಸೀತೆ—ತಮಸೆ, ದಿಟವಾಗಿಯೂ ವನದೇವತೆಗಳು ಕೂಡ ನನ್ನನ್ನು ನೋಡಲಾರರಷ್ಟೆ?

ತಮಸೆ—ವತ್ಸೆ, ಮಂದಾಕಿನೀದೇವಿಯ ಪ್ರಭಾವ ಎಲ್ಲ ದೇವತೆಗಳಿಗಿಂತಲೂ ಹೆಚ್ಚಿನದು. ಸಂಶಯಪಡುವೆಯೇಕೆ?

ಸೀತೆ—ಹಾಗಾದರೆ ನಾವೂ ಹಿಂಬಾಲಿಸೋಣ. (ನಡೆಯುವರು)

ರಾಮ—ಭಗವತಿ, ಗೋದಾವರಿ, ನಮಸ್ಕರಿಸುತ್ತೇನೆ.

ವಾಸಂತಿ (ನೋಡಿ)—ವಿಜಯಿಯಾಗಿ ಹೆಣ್ಣಾನೆಯೊಡನೆ ಶೋಭಿಸುವ ದೇವಿಯ ಕಂದನನ್ನು ನೋಡಿ ಆನಂದಿಸು.

ರಾಮ—ಚಿರಂಜೀವಿಗೆ ಗೆಲುವೇ ಆಗಲಿ.

ಸೀತೆ—ಓ, ನನ್ನ ಕಂದನು ಹೀಗೆ ಬೆಳೆದಿರುವನೆ!

ರಾಮ—ಹಾ ದೇವಿ, ನೀನು ಪುಣ್ಯವಂತೆ—

ಮೊಳೆವ ದಂತವು ಬಿಸದ ಕಿಸಲಯದಂತೆ ತೊಳತೊಳ ತೊಳಗಲು,
ಸತಿಯೆ ನಿನ್ನಯ ಕನ್ನವುರದಾ ತಳಿರ ತೊಂಗಲನೆಳೆಯಲು;
ನೀನು ಮುದ್ದಿಸುತಿರ್ದ ಕಂದನು ಮದಿಸಿದಾನೆಯ ಗೆಲ್ಲಲು
ತಕ್ಕನಾದನು ಯೌವನೋಚಿತ ಲೀಲೆಯೊಳಗೂ ಚದುರನು. ೧೫

ಸೀತೆ—ಚಿರಂಜೀವಿಗೆ ಈ ಸೌಮ್ಯಳ ವಿಯೋಗವೆಂದೂ ಬಾರದಿರಲಿ!

ರಾಮ—ಸಖಿ, ವಾಸಂತಿ, ನೋಡು: ಕಂದನು ಆಗಲೇ ಕಾಂತೆಯನ್ನೊಲಿಸುವ ಚಾತುರ್ಯವನ್ನೂ ಕಲಿತಾಗಿದೆ—

ಕಿತ್ತು ಲೀಲೆಯಿನಿತ್ತು ತಾವರೆದಂಟ ತುತ್ತನು ಮತ್ತಿದು
ನಡುವೆ ಬಾಯೊಳಗೂದುತಿರ್ಪುದು ಪದ್ಮಗಂಧಿತ ಜಲವನು;
ತುಂಬಿ ತುಂತುರ ಸೊಂಡಿಲಲ್ಲಿದು ಸೇಕಗೈದಿದೆ ಮುದದೊಳು
ಕಡೆಗೆ ಪಿಡಿದಿದೆ ಕಮಲದೆಲೆಯನು ಕೊಡೆಯ ತೆರದಲಿ ಮೇಗಡೆ. ೧೬

ಸೀತೆ—ತಮಸೆ, ಇದೇನೋ ಹೀಗಾಗಿದೆ; ಇಷ್ಟುಹೊತ್ತಿಗೆ ಆ ಕುಶಲವರು ಹೇಗಿರುವರೋ ಕಾಣೆ.

ತಮಸೆ—ಇದು ಹೇಗೋ ಅವರೂ ಹಾಗೆಯೇ.

ಸೀತೆ—ದುಸ್ಸಹವಾದ ಪತಿವಿರಹದ ಜತೆಗೆ ಪುತ್ರವಿರಹವೂ ಕೂಡಿಕೊಂಡಿರುವಂತಹ ಮಂದಭಾಗಿನಿ ನಾನು.

ತಮಸೆ—ಇದು ವಿಧಿವಿಲಾಸ.

ಸೀತೆ—ಅಲ್ಲೊಂದಿಲ್ಲೊಂದು ಹಲ್ಲು ಮೊಳೆತು, ಮನೋಹರವಾಗಿ ಕೆನ್ನೆ ಮಿರುಗುವಾಗ, ಎಡೆಬಿಡದೆ ಇನಿದನಿಯಿಂದ ಅರಿಯದ ಮುಗುಳ್ನಗೆ ಸೂಸುತ್ತಿರುವಾಗ, ಹಕ್ಕಿಯ ತುಪ್ಪುಳಂತೆ ಹಾರಾಡುವ ಮುಂಗೂದಲನ್ನು ಕಟ್ಟಿರುವಾಗ, ಆ ಪುಟ್ಟ ಮಕ್ಕಳ ಮುಖಕಮಲಗಳನ್ನು ಒಮ್ಮೆಯೂ ಆರ್ಯಪುತ್ರನು ಮುದ್ದಾಡದೆ ಇದ್ದಮೇಲೆ ಅವುಗಳನ್ನು ನಾನು ಹೆತ್ತದ್ದು ಏನು ಪ್ರಯೋಜನ?

ತಮಸೆ—ದೇವತೆಗಳ ಕೃಪೆಯಿಂದ ನಿನ್ನಿಷ್ಟ ನೆರವೇರಲಿ.

ಸೀತೆ—ತಮಸೆ, ಮಕ್ಕಳ ಸ್ಮರಣೆಯಿಂದ ಎದೆಹಾಲುಕ್ಕಿ ಹರಿಯುತ್ತಿದೆ; ಈಗ ಮಕ್ಕಳ ತಂದೆಯೂ ಹತ್ತಿರವೇ ಇರುವುದರಿಂದ ಒಂದು ಕ್ಷಣವಾದರೂ ಕುಟುಂಬಿನಿಯಾದಂತಾಗಿದೆ.

ತಮಸೆ—ಹೇಳುವುದೇನಿದೆ? ಮಗುವೆಂಬುದು ಪ್ರೇಮೋತ್ಕರ್ಷದ ಪರಮಾವಧಿ; ತಾಯಿತಂದೆಗಳನ್ನು ಮತ್ತಷ್ಟು ಹತ್ತಿರ ಸೆಳೆದು ತರುವ ಸೂತ್ರ.

ದಂಪತಿಗಳೆದೆಯಾಳದೊಳು ಕೂಡೆ ಕೆಳೆಯುಂಟು,
ತಾನಸಹುದು ಮಗುವೆಂಬ ಆನಂದದಾ ಗಂಟು. ೧೭

ವಾಸಂತಿ—ದೇವನು ಇದನ್ನೂ ಚಿತ್ತೈಸಬೇಕು—

ಸೊಬಗಿಂದೆಸೆಯುವ ಪುಕ್ಕವು ಪೊಸತಿರೆ
ನಿತ್ಯವು ಸೀತೆಯೆ ಬೆಳೆಯಿಸಿದ ;
ನವಿಲು ಕದಂಬದೊಳುಲಿವುದು ಪೆಣ್ಬಳಿ
ಶಿಖೆಯೊಪ್ಪಲು ಮಣಿಮುಕುಟದೊಲು. ೧೮

ಸೀತೆ (ಕೌತುಕ, ಸ್ನೇಹಾಶ್ರುಗಳಿಂದ)—ಹೌದು, ಅದೇ ಇದು.

ರಾಮ—ಆನಂದಿಸು, ಕಂದ, ಆನಂದಿಸು.

ಸೀತೆ—ಹೀಗೆಯೇ ಆಗಲಿ.

ರಾಮ— ನೀನು ಮಂಡಲದಂತೆ ಸುತ್ತುತೆ ಸುಳಿಯಲಿನಿಯಳ ಕಣ್ಣಿನ
ಕಾಂತಿ ಹೆಚ್ಚಿತ್ತವಳ ಹುಬ್ಬುಗಳೊಡನೆ ಕುಣಿಕುಣಿಯುತ್ತಿರೆ ;
ತನ್ನ ಕೈತಳಿರಿಂದ ಮುಗ್ಧೆಯು ತಾಳಹಾಕುತೆ ಕುಣಿಸಿದ
ನಿನ್ನ ನೆನೆವೆನು ಕಂದನೆಂಬಾ ಪ್ರೀತಿಯುಕ್ಕಲು ಬಗೆಯೊಳು. ೧೯

ಆಹಾ, ಮೂಕಜಂತುಗಳು ಕೂಡ ಸ್ನೇಹವನ್ನು ಬಿಡುವುದಿಲ್ಲ—

ಇನಿತೇ ಪೂಗಳನುಳ್ಳ ಕದಂಬವ
ಪ್ರಿಯತಮೆಯೇ ತಾಂ ಬೆಳೆಸಿದಳು ;

ಸೀತೆ (ನೋಡಿ, ಕಣ್ಣೀರಿಂದ)—ಹೌದು, ಆರ್ಯಪುತ್ರನು ಗುರುತಿಸಿರುವುದು ಸರಿ.

ರಾಮ— ನಂಟನೊಲಿಲ್ಲಿಯೆ ನಲಿಯುವ ನವಿಲೂ
ದೇವಿಯು ನೆನೆವುದು ದಿಟವಹುದು. ೨೦

ವಾಸಂತಿ—ದೇವನು ಇಲ್ಲಿ ಆಸನವನ್ನು ಸ್ವೀಕರಿಸಬೇಕು.

(ರಾಮನು ಕುಳ್ಳಿರುವನು)

ವಾಸಂತಿ—ಇಲ್ಲಿಯೇ ನಳನಳಿಸಿ ಬೆಳೆದ ಎಳೆಬಾಳೆಗಳ
ನಡುವಿಹುದು ಸತಿಯೊಡನೆ ನೀಂ ಪಟ್ಟ ಶಿಲೆಯು ;
ಸೀತೆಯಿಲ್ಲಿಯೆ ಕುಳಿತು ಹುಲ್ಲೆಮರಿಗಳಿಗಂದು
ತನಿವುಲ್ಲನೀಯುತಿರೆ ನಿಂತುವೆಡೆಬಿಡದೆ. ೨೧

ರಾಮ—ಇದನ್ನು ನೋಡುವುದಂತೂ ಶಕ್ಯವೇ ಇಲ್ಲ. (ಅಳುತ್ತ ಬೇರೆಡೆಗೆ ಕುಳಿತುಕೊಳ್ಳುವನು).

ಸೀತೆ—ಸಖಿ ವಾಸಂತಿ, ಆರ್ಯಪುತ್ರನಿಗೂ ನನಗೂ ಇದನ್ನು ತೋರಿಸಿ ನೀನು ಏನು ಮಾಡಿಬಿಟ್ಟೆ! ಅಯ್ಯೋ, ಅಯ್ಯೋ, ಅದೇ ಆರ್ಯಪುತ್ರ, ಅದೇ ಪಂಚವಟಿ, ಅದೇ ಸಖಿ ವಾಸಂತಿ; ಅವೇ ವಿಹಾರಸಾಕ್ಷಿಗಳಾದ ಗೋದಾವರೀ ತಟಪ್ರದೇಶಗಳು, ಅವೇ ಮಕ್ಕಳಿಗೆ ಸಮನಾದ ಮೃಗ ಪಕ್ಷಿಪಾದಪಗಳು; ಅದೇ ಸೀತೆಯೇ ನಾನು. ಆದರೆ ನನ್ನ ದುರದೃಷ್ಟಕ್ಕೆ ಕಣ್ಣಿಂದ ನೋಡುತ್ತಿದ್ದರೂ ಇದೊಂದೂ ನನ್ನ ಪಾಲಿಗಿಲ್ಲದಂತೆ ಜೀವ ಲೋಕವೇ ಪಲ್ಲಟಿಸಿದೆ.

ವಾಸಂತಿ—ಸಖಿ ಸೀತೆ, ಇದೇಕೆ, ರಾಮಭದ್ರನ ಅವಸ್ಥೆ ಕಾಣಿಸುವುದಿಲ್ಲವೆ?—

ನವಕುವಲಯಮೆನಲವಯುವ ನಯನೋತ್ಸವವೀಯೆ,
ದಿನದಿನವೂ ನೋಡಿರೆಯುಂ ನವನವನೆನಿಸಿರ್ದಂ;
ಗತಕರಣಂ ಹತವರ್ಣಂ ಪರಿದುರ್ಬಲತೇಜಂ
ದುರ್ಜ್ಞೇಯಂ ಎಂದೊಡಮವನೀಗಳ್ ಕಣ್ಗೆನಿಯಂ. ೨೨

ಸೀತೆ—ಕಾಣಿಸುತ್ತದೆ, ಸಖಿ, ಕಾಣಿಸುತ್ತದೆ.

ತಮಸೆ—ಪ್ರಿಯನನ್ನು ಕಾಣುತ್ತಲೇ ಇರು.

ಸೀತೆ—ಹಾ ದೈವವೆ, ನಾನಿಲ್ಲದೆ ಇವನು, ಇವನಿಲ್ಲದೆ ನಾನು ಎಂಬುದನ್ನು ಕನಸಿನಲ್ಲಿ ಕೂಡ ಯಾರಾದರೂ ಊಹಿಸಿದ್ದರೆ? ಒಂದು ಕ್ಷಣ, ಜನ್ಮಾಂತರ ಕ್ಕೊಂದು ಸಲ ದರ್ಶನವಿತ್ತಿರುವ ವತ್ಸಲನಾದ ಆರ್ಯಪುತ್ರನನ್ನು ಕಣ್ಣೀರುಗಳ ನಡುವೆಯಾದರೂ ನೋಡಿಬಿಡುತ್ತೇನೆ.

ತಮಸೆ (ಅಪ್ಪಿಕೊಂಡು, ಕಣ್ಣೀರಿಡುತ್ತ)—

ತೇರ್ರೈಸಿ ಪರಿಪರಿವ ಆನಂದಶೋಕಗಳ
ಬಾಷ್ಪವನು ಸುರಿಸುತಲಿ ಕಣ್ಣಾರಳಿಸಿ;
ಸುರಿಸಿ ನಲ್ಮೆಯ ನಿನ್ನ ನಲ್ನೋಟ ಕಾಂತನನು
ಮೀಯಿಸಿದೆ ಹಾಲ ಕಾಲುವೆಯ ತೆರದಿ. ೨೩

ವಾಸಂತಿ—ಜೇನನೊಸರುವ ಮರಗಳೀಯಲಿ ಹೂವುಹಣ್ಣುಗಳ ಅರ್ಘ್ಯವ
ಫುಲ್ಲ ಪದ್ಮದ ಕಂಪ ಬೀರುತೆ ಬನದ ಗಾಳಿಯು ಬೀಸಲಿ;

ಬಿಡದೆಯಿಂಗೊರಲಿಂದೆ ಪಕ್ಷಿಗಳೀಗ ಗಾನಂಗೈಯಲಿ
ದೇವ ರಾಮನು ಮರಳಿ ತಾನೇ ಬನಕೆ ನಡೆತಂದಿರುವನು. ೨೪

**ರಾಮ**—ಬಾ, ಸಖಿ, ವಾಸಂತಿ, ಇಲ್ಲಿಯೇ ಕುಳಿತುಕೋ.

**ವಾಸಂತಿ (ಕುಳಿತು, ಕಣ್ಣೀರಿಂದ)**–ಮಹಾರಾಜ, ಕುಮಾರ ಲಕ್ಷ್ಮಣನಿಗೆ ಕುಶಲವೆ?

**ರಾಮ (ಕೇಳದವನಂತೆ)**—

ಕರಕಮಲದಿಂದಿತ್ತು ನೀರ್ವುಲ್ಲು ಕಾಳ್ಗಳನು
ಮೈಥಿಲಿಯೆ ಸಲಹಿದೀ ತರುಪಕ್ಷಿ ಹರಿಣಗಳ;
ನೋಡಲ್ಕೆ ಮೂಡುವುದು ಆವುದೋ ಮನವಿಕೃತಿ,
ಹೃದಯವಿದ್ರಾವಕವು, ಬಂಡೆಗಳ ಭೇದಕವು. ೨೫

**ವಾಸಂತಿ**—ಮಹಾರಾಜ, ಕುಮಾರ ಲಕ್ಷ್ಮಣನಿಗೆ ಕುಶಲವೆ ಎಂದು ಕೇಳುತ್ತಿದ್ದೇನೆ.

**ರಾಮ (ಸ್ವಗತ)**—ಆಹಾ, ಪ್ರೇಮಶೂನ್ಯವಾಗಿ 'ಮಹಾರಾಜ'ನೆಂದು ಕರೆಯುವುದನ್ನೂ, ಲಕ್ಷ್ಮಣನ ಕುಶಲವನ್ನು ಮಾತ್ರ ಕೇಳುವುದನ್ನೂ ನೋಡಿದರೆ ಈಕೆಗಾಗಲೇ ಸೀತೆಯ ವೃತ್ತಾಂತವು ತಿಳಿದಿರುವಂತಿದೆ. (ಪ್ರಕಾಶ) ಹೌದು, ಕುಮಾರನು ಕುಶಲದಿಂದಿದ್ದಾನೆ.

**ವಾಸಂತಿ (ಅಳುತ್ತ)**—ಓ, ದೇವ, ನೀನು ಇಷ್ಟು ದಾರುಣನಾಗಬಹುದೆ?

**ಸೀತೆ**—ಸಖಿ, ವಾಸಂತಿ ನೀನೇಕೆ ಹೀಗೆ ನುಡಿಯುವೆ? ಆರ್ಯಪುತ್ರನು ಎಲ್ಲರಿಂದಲೂ ಪ್ರಿಯನುಡಿಗಳಿಗೆ ಮಾತ್ರ ಪಾತ್ರನು; ನನ್ನ ಪ್ರಿಯಸಖಿಯಿಂದಂತೂ ವಿಶೇಷವಾಗಿ.

**ವಾಸಂತಿ**— ನೀನೆ ಎನ್ನಯ ಹರಣ, ನೀನೆ ಎದೆ ಎರಡನೆಯ,
ನೀನೆ ಚಂದ್ರಿಕೆ ಕಣ್ಗೆ ನೀನಂಗಕಮೃತ;
ಪ್ರಿಯಶತದಿನೀ ತೆರದೆ ಮುಂಡಾಡಿ ಮುಗುದೆಯನು,
ಆಕೆಯನೆ....ನುಡಿ ಸಾಕು, ಮುಂದಿನದು ಏಕೆ? ೨೬

(ಎಂದು ಮೂರ್ಛೆ ಹೋಗುವಳು)

**ತಮಸೆ**—ಮಾತನ್ನು ನಿಲ್ಲಿಸಿದ್ದು, ಮೂರ್ಛೆಹೋದುದು, ಎರಡೂ ಸರಿಯೇ ಆಯಿತು.

**ರಾಮ**—ಸಖಿ, ಸಂತೈಸಿಕೊ, ಸಂತೈಸಿಕೊ.

ವಾಸಂತಿ (ಸಂತೈಸಿಕೊಂಡು)—ದೇವನು ಈ ಅಕಾರ್ಯವನ್ನು ಮಾಡಿದ್ದೇಕೆ?

ರಾಮ—ಜನಗಳು ಸೈರಿಸುವುದಿಲ್ಲವೆಂದು.

ವಾಸಂತಿ—ಯಾವ ಕಾರಣಕ್ಕಾಗಿ?

ರಾಮ—ಕಾರಣ ಏನೋ ಅವರಿಗೇ ಗೊತ್ತು.

ತಮಸೆ—ಖಂಡನೆ ಬಹಳ ತಡವಾಗಿ ಬಂದಿತು.

ವಾಸಂತಿ—

ನಿನಗೆ ಕೀರ್ತಿಯಲ್ತೆ ಪ್ರಿಯವು,
ಓ ಕಠೋರನೆ!
ಇದಕು ಘೋರವೆನಿಪಕೀರ್ತಿ
ಬುವಿಯೊಳಿರ್ಕುಮೆ?
ಹರಿಣನೇತ್ರೆಯಂದು ಬನದೆ
ಪಟ್ಟ ಬವಣೆಯು,
ದೊರೆಯೆ ನೀನು ತಿಳಿವೆಯೇನು
ನನಗೆ ಪೇಳ್ವೆಯಾ? ೨೭

ಸೀತೆ—ಸಖಿ, ವಾಸಂತಿ, ಆಗಲೇ ನೋಯುತ್ತಿರುವ ಆರ್ಯಪುತ್ರನನ್ನು ಮತ್ತೂ ನೋಯಿಸುವ ನೀನೇ ನಿಜವಾಗಿಯೂ ದಾರುಣಳು ಮತ್ತು ಕಠೋರಳು.

ತಮಸೆ—ಪ್ರಣಯವು ಇದನ್ನು ಹೇಳುತ್ತಿದೆ—ಶೋಕವೂ ಸಹ.

ರಾಮ—ಸಖಿ, ಇಲ್ಲಿ ತಿಳಿಯಬೇಕಾದ್ದೇನಿದೆ?

ಒಂದೆ ವರ್ಷದ ಹುಲ್ಲೆಗರುವಂತಳ್ಕಿ ಮಿಡುಕುವ ಕಣ್ಗಳಿಂ-
ದಾಕೆಯದಿರುವ ಗರ್ಭಭಾರದಿನಲಸೆಯಾಗಿರಲಾಕೆಯಾ;
ಮೃದುಲ ಬಾಲ ಮೃಣಾಲಸದೃಶವೊ ಚಂದ್ರಿಕಾಮಯವೋ ಎನಿ-
ಪ್ಪಂಗಲತೆಯುಳಿದಿರ್ಕುಮೆಂಬೆನು ಕಾಡುಮೃಗಗಳ ಬಾಯೊಳು. ೨೮

ಸೀತೆ—ಆರ್ಯಪುತ್ರ, ಬದುಕಿದ್ದೇನೆ, ಇದೋ ಬದುಕಿದ್ದೇನೆ.

ರಾಮ—ಹಾ ಪ್ರಿಯೆ, ಜಾನಕಿ, ಎಲ್ಲಿರುವೆ?

ಸೀತೆ—ಅಯ್ಯೋ, ಅಯ್ಯೋ, ಇತರರಂತೆ ಆರ್ಯಪುತ್ರನೂ ಗಳಗಳನೆ ಅಳುವನಲ್ಲಾ!

ತಮಸೆ—ವತ್ಸೆ, ಇದು ಸರಿಯಾಗಿಯೇ ಇದೆ. ಗೋಳಿನಿಂದಲೇ ಗೋಳನ್ನು ಶಮನಗೊಳಿಸಬೇಕು—

ಕೆರೆಯ ನೀರು ಮೇರೆ ಮೀರೆ
ಕೋಡಿಯೇ ನಿವಾರಕ;
ಶೋಕತಪ್ತ ಹೃದಯಕಂತೆ
ಗೋಳಿದೊಂದೆ ಧಾರಕ. ೨೯

ವಿಶೇಷತಃ, ರಾಮಭದ್ರನಿಗೆ ಜಗತ್ತೇ ನಾನಾರೀತಿಯಿಂದ ಕಷ್ಟಮಯ ವಾಗಿದೆ—

ಧರೆಯ ವಿಧಿವತ್ತಾಗಿ ಪಾಲಿಸಬೇಕು ಒಂದೇ ಮನದಲಿ,
ಪ್ರಿಯೆಯ ಶೋಕವು ಸುಡುವುದಸುವನು ಬಿಸಿಲು ಪೂವನು ಸುಡುವೊಲು;
ತ್ಯಾಗಗೈದಿರೆ ತಾನೆ ಶೋಕಿಪುದೆಂಬುದಾಗದು ಸುಲಭವು
ಶ್ವಾಸವಿನ್ನೂ ಉಳಿದುದಾದೊಡೆ, ಲಾಭವಾತಗೆ ರುದಿತವು. ೩೦

ರಾಮ—ಕಷ್ಟ, ಅಯ್ಯೋ ಕಷ್ಟ—

ಶೋಕವೇಗದೆ ಹೃದಯವೊಡೆವುದು, ಎರಡು ಹೋಳೇ ಆಗದು;
ವಿಕಲಕಾಯವು ಮೂರ್ಛೆಗೊಳ್ವುದು, ಬಿಡದು ಚೇತನವೊಂದನು;
ಒಳಗಿನುರಿಯಿದು ಸುಡುವುದೊಡಲನು ಬೂದಿಮಾಡದು ಬೇಗನೆ
ವಿಧಿಯು ಗೈವುದು ಮರ್ಮಘಾತವನಸುವನೇ ಕಡಿದೊಗೆಯದು. ೩೧

ಸೀತೆ—ಇದು ದಿಟ.

ರಾಮ—ಪುಣ್ಯಾತ್ಮರಾದ ಪೌರಜಾನಪದ ಪ್ರಜೆಗಳೇ—

ನಿಮಗೆ ಸೇರದು ದೇವಿಯಿರುವುದು ಮನೆಯೊಳೆಂಬುದು ತಿಳಿಯಲು
ಹುಲ್ಲಿನಂತೆಯೆ ಶೂನ್ಯವನದೊಳು ಬಿಟ್ಟೆನಾಕೆಯನಳದೆಯೆ;
ಕರಗಿಸುತ್ತಿವೆ ಮತ್ತೆ ಪರಿಚಿತವಸ್ತುನಿಕರವಿವೆನ್ನನು
ಇಂದು ಆಶ್ರಯರಹಿತ ರೋದಿಪೆನಿಂತು ಬಸದೊಳು, ಮನ್ನಿಸಿ. ೩೨

ವಾಸಂತಿ (ಸ್ವಗತ)—ಶೋಕದ ಹೊನಲು ಜೋರಾಗಿ ಕೋಡಿವರಿಯುತ್ತಿದೆ! (ಪ್ರಕಾಶ) ದೇವ, ಕಳೆದುಹೋದ ವಿಷಯದಲ್ಲಿ ಧೈರ್ಯ ತಾಳಬೇಕು.

ರಾಮ—ಸಖಿ, ಏನು? ಧೈರ್ಯವೆನ್ನುವೆಯಾ—

ದೇವಿಯಿಲ್ಲದೆ ಶೂನ್ಯವಾಗಿಹ
ಜಗಕೆ ಈರಾರಬ್ದವು

ಸಂದು, ಹೆಸರೂ ಲುಪ್ತವೆನಿಸಿದೆ;
ರಾಮನಸುಗಳು ಪೋಗವು. ೩೩

ಸೀತೆ—ಆರ್ಯಪುತ್ರನ ಈ ಮಾತುಗಳಿಂದ ಮೋಹಿತಳಾಗಿದ್ದೇನೆ.

ತಮಸೆ—ಹೌದು, ಮಗಳೇ;

ಸ್ನೇಹಾರ್ದ್ರವೆನೆ ಶೋಕದಾರುಣಗಳಾಗಿರುವ
ಮಧುರತಮ ನುಡಿಗಳಿವು ತಾವಲ್ಲವು;
ವಿಷವೆ ಅಡಗಿರೆ ಒಳಗೆ ನಿನ್ನ ಮೇಲುರುಳುತಿಹ
ಸವಿಜೇನ ಧಾರೆಗಳೆ ಇವುಗಳಲ್ತೆ! ೩೪

ರಾಮ—ವಾಸಂತಿ, ನಾನಾದರೋ—

ಉರಿವ ಪಂಜಿನ ಕಣೆಯೆ ಎದೆಯೊಳಗೆ ನಟ್ಟಿಹುದೊ
ವಿಷಜಂತು ಮೇಣ್ ಬಂದು ಕಚ್ಚಿರುವುದೋ;
ಎಂದೆನಿಪ ತೀವ್ರತರ ಶೋಕಶಲ್ಯವು ಒಳಗೆ
ಮರ್ಮಗಳ ಕೊಯ್ದಿರೆಯು ತಡೆದೆನಲ್ತೆ. ೩೫

ಸೀತೆ—ಮಂದಭಾಗಿನಿಯಾದ ನಾನು ಆರ್ಯಪುತ್ರನ ಶೋಕ ಮರುಕೊಳಿಸುವುದಕ್ಕೂ ಕಾರಣವಾದೆನೇ!

ರಾಮ—ನಾನು ಅಂತಃಕರಣವನ್ನು ಸ್ವಲ್ಪವೂ ಅಳ್ಳಾಡದಂತೆ ಗಟ್ಟಿಹಿಡಿದಿದ್ದರೂ ಈ ಪರಿಚಿತವಾದ ಪ್ರಿಯವಸ್ತುಗಳನ್ನು ನೋಡಿದೊಡನೆ ಇಷ್ಟು ತೀವ್ರವಾದ ದುಃಖಾವೇಗವು ಒತ್ತಿಬರುತ್ತಿದೆ:—

ದಡವ ಮೀರಿ ಕೊಚ್ಚುತಿರುವ ಅಳಲ ಹುಚ್ಚುಹೊಳೆಯನು
ತಡೆಯಲೆನ್ನ ಗೈದ ಯತ್ನಗಳನು ಮುರಿಯುತೊಳಗಿನಿಂ;
ಭರದೆ ಮತ್ತೆ ಪರಿಯುತಿಹುದು ಬಗೆವಿಕಾರವಾವುದೋ
ಮರಳ ಸೇತುವೊಡೆಯೆ ವೇಗದಿಂದುರುಳ್ವ ಪೊಸಲೆನಲ್. ೩೬

ಸೀತೆ—ಆರ್ಯಪುತ್ರನ ಈ ದುರ್ವಾರವೂ ದಾರುಣವೂ ಆದ ದುಃಖಸಂಕ್ಷೋಭವನ್ನು ಕಂಡು ತನ್ನ ದುಃಖವನ್ನು ಮರೆತು ಮರವಟ್ಟಿದೆ, ನನ್ನ ಹೃದಯ.

ವಾಸಂತಿ (ಸ್ವಗತ)—ಅಯ್ಯೋ, ದೇವನಿಗೆ ಕಷ್ಟವೊದಗಿತಲ್ಲಾ! ಇರಲಿ, ಅವನ ಮನಸ್ಸನ್ನಾದರೂ ಬೇರೆಡೆಗೆ ತಿರುಗಿಸುತ್ತೇನೆ. (ಪ್ರಕಾಶ) ದೇವ, ಚಿರಪರಿಚಿತವಾದ ಈ ಜನಸ್ಥಾನಪ್ರದೇಶಗಳನ್ನು ನೋಡಿ ಸನ್ಮಾನಿಸು.

ರಾಮ—ಹಾಗೆಯೇ ಆಗಲಿ. (ಎದ್ದು ನಡೆಯುವನು).

ಸೀತೆ—ದುಃಖದ ಉದ್ದೀಪಕವನ್ನೇ ಪ್ರಿಯಸಖಿ ವಿನೋದನೋಪಾಯ ವೆಂದು ಭಾವಿಸಿದಂತೆ ತೋರುತ್ತದೆ.



ವಾಸಂತಿ (ದುಃಖದಿಂದ)—ದೇವ, ದೇವ—

ಇದೆ ಲತಾಗೃಹದಲ್ಲಿ ನೀನಿರಲವಳ ದಾರಿಯ ನೋಡುತ್ತೆ,
ಅವಳು ತಳುವಿದಳೆಂದು ಗೋದೆಯ ಪುಳಿಲೊಳಂಚೆಯ ಮೆಚ್ಚುತೆ;
ಬಂದು ಕಾಣುತೆ ನೀನು ಮುನಿದಂತಿರ್ದುದನ್ನವಳೊಡನೆಯೆ
ಬೆದರಿ ಕೈಮುಗಿದಿರ್ದಳಲ್ಲವೆ ಪದ್ಮಕುಟ್ಮಲದಂತೆವೋಲ್. ೩೭

ಸೀತೆ—ನೀನು ದಾರುಣಳು, ವಾಸಂತಿ, ನೀನು ದಾರುಣಳು. ಹೀಗೆ ಹೃದಯ ಮರ್ಮವನ್ನು ನಾಟಿರುವ ಕಣೆಯನ್ನೇ ಮತ್ತೆ ಮತ್ತೆ ಚುಚ್ಚಿ ನನ್ನನ್ನೂ ಆರ್ಯಪುತ್ರನನ್ನೂ ನೋಯಿಸುತ್ತಿರುವೆ.

ರಾಮ—ಓ ಕೋಪಶೀಲೆ, ಜಾನಕಿ, ಇಲ್ಲಿಲ್ಲೇ ಕಂಡಂತಾದರೂ ನೀನು ನನ್ನಲ್ಲಿ ಮರುಕವನ್ನೇಕೆ ತೋರಿಸುವುದಿಲ್ಲ?—

ಹೃದಯ ಬಿರಿವುದು ದೇಹಬಂಧವೆ ಮುರಿದು ಬೀಳುತ್ತಿರ್ಪುದು,
ಜಗವೆ ಶೂನ್ಯವು ಸತತವುರಿವುದು ಒಳಗೆ ಶೋಕಜ್ವಾಲೆಯು;
ಅಂತರಾತ್ಮವು ವಿಕಲ ವಿಧುರವು ಮುಳುಗೆ ಕಾರ್ಗತ್ತಲೆಯೊಳು,
ಎಲ್ಲ ದೆಸೆಯೊಳು ಮೋಹ ಕವಿದುದು, ಮಂದಭಾಗ್ಯನದೇವೆಸು? ೩೮

(ಮೂರ್ಛೆ ಹೋಗುವನು)

ಸೀತೆ—ಅಯ್ಯೋ, ಅಯ್ಯೋ, ಮತ್ತೆ ಆರ್ಯಪುತ್ರನು ಮೂರ್ಛೆಹೋದನಲ್ಲಾ!

ವಾಸಂತಿ—ದೇವ, ಸಂತೈಸಿಕೊ, ಸಂತೈಸಿಕೊ.

ಸೀತೆ—ಆರ್ಯಪುತ್ರ, ಈ ಮಂದಭಾಗಿನಿಯಾದ ನನಗಾಗಿ ಸಕಲ ಜಗತ್ತಿನ ಮಂಗಳಕ್ಕೂ ಆಧಾರಭೂತನಾದ ನಿನಗೆ ಪ್ರಾಣಸಂಶಯವನ್ನುಂಟು ಮಾಡುವ ಅವಸ್ಥೆ ಮತ್ತೆ ಮತ್ತೆ ಬರುವಂತಾಯಿತೇ? ಅಯ್ಯೋ, ಕೆಟ್ಟೆನು.

(ಮೂರ್ಛೆ ಹೋಗುವನು)

ತಮಸೆ—ವತ್ಸೆ, ಸಂತೈಸಿಕೊ; ಸಂತೈಸಿಕೊ. ರಾಮಭದ್ರನು ಜೀವಿಸುವುದಕ್ಕೆ ಮತ್ತೆ ನಿನ್ನ ಪಾಣಿಸ್ಪರ್ಶವೊಂದೇ ಉಪಾಯ.

ವಾಸಂತಿ—ಅಯ್ಯೋ, ಇನ್ನೂ, ಎಚ್ಚರವಾಗಲಿಲ್ಲವೆ? ಹಾ ಪ್ರಿಯಸಖಿ, ಸೀತೆ, ಎಲ್ಲಿರುವೆ? ನಿನ್ನ ಪ್ರಾಣೇಶನನ್ನು ಉಳಿಸಿಕೊ.

(ಸೀತೆ ಗಾಬರಿಯಿಂದೆದ್ದುಬಂದು ರಾಮನ ಎದೆಯನ್ನೂ ಹಣೆಯನ್ನೂ ಸವರುವಳು)

ವಾಸಂತಿ—ಅದೃಷ್ಟವಶಾತ್ ರಾಮಭದ್ರನು ಎಚ್ಚತ್ತನು.

ರಾಮ—

ಅಮೃತಮಯ ಲೇಪದಿಂದೊಳಗೆ ಹೊರಗೆಲ್ಲ ಕಡೆ
ದೇಹಧಾತುಗಳನ್ನು ಲೇಪಗೈದು;
ಸ್ಪರ್ಶವಿದು ತಟ್ಟನೆಯೆ ಮತ್ತೆ ಜೀವವ ತರಿಸಿ
ಬೇರೆ ಸುಖ ಮೂರ್ಛೆಯನು ಮರುಕೊಳಿಸಿದೆ. ೩೯

(ಆನಂದದಿಂದ ಮುಚ್ಚಿದ ಕಣ್ಗಳಿಂದಲೇ) ಸಖಿ, ವಾಸಂತಿ, ನೀನು ಅದೃಷ್ಟವಂತೆ.

ವಾಸಂತಿ—ಹೇಗೆ, ದೇವ?

ರಾಮ—ಮತ್ತೇನು? ಸೀತೆ ಮತ್ತೆ ದೊರೆತಳು.

ವಾಸಂತಿ—ದೇವ, ರಾಮಭದ್ರ, ಅವಳೆಲ್ಲಿ?

ರಾಮ (ಸ್ಪರ್ಶಸುಖವನ್ನು ಸೂಚಿಸುತ್ತ)—ನೋಡು, ಮುಂದೆಯೇ ಇರುವಳು.

ವಾಸಂತಿ—ದೇವ, ಹೀಗೆ ಮರ್ಮಭೇದಕವಾದ ದಾರುಣಪ್ರಲಾಪಗಳಿಂದ ಆಗಲೇ ಪ್ರಿಯಸಖೀದುಃಖದಿಂದ ಬೇಯುತ್ತಿರುವ ನನ್ನನ್ನು ಮತ್ತೂ ಏಕೆ ಸುಡುತ್ತಿರುವೆ?

ಸೀತೆ—ಹೋಗಬೇಕೆಂದು ಇಚ್ಛೆಯಾಗುತ್ತದೆ. ಆದರೆ ನನ್ನ ದೀರ್ಘದಾರುಣ ಸಂತಾಪವನ್ನು ಕೂಡ ತಟ್ಟನೆ ತೊಲಗಿಸಿರುವ, ಈ ನಿರಂತರಪ್ರೇಮ ಶೀತಲವಾದ, ಆರ್ಯಪುತ್ರನ ಸ್ಪರ್ಶ ನನ್ನ ಕೈಯನ್ನು ವಜ್ರಲೇಪದಿಂದ ಅಲ್ಲಿಯೇ ಅಂಟಿಸಿಬಿಟ್ಟಿದೆ. ಬೆವರುತ್ತ, ಮರವಟ್ಟು, ನಡುಗುತ್ತಿರುವ ನನ್ನ ಕೈಯನ್ನು ಬಿಡಿಸಿಕೊಳ್ಳಲಾರೆ.

ರಾಮ—ಸಖಿ, (ಹುಚ್ಚನ) ಪ್ರಲಾಪಗಳೆಂದೇಕೆ ಹೇಳುವೆ?

ಮುನ್ನ ಪರಿಣಯವಿಧಿಯೊಳಾವುದ ಪಿಡಿದೆನೊಪ್ಪಿರೆ ಕಂಕಣ,
ಸುಚಿರಪರಿಚಿತಮದರ ಅಮೃತದ ತಣ್ಪನೊಸರುವ ಸೋಂಕೆನೆ;

ಸೀತೆ—ಆರ್ಯಪುತ್ರ, ಇಂದೂ ನೀನು ಅಂದೇ ಸಮನಾಗಿರುವೆ.

ರಾಮ—ಅದೆ ಇದೆಂಬೆನು ಮಂಜುಗೆಡ್ಡೆಯು ತೆರದೊಳೆಸೆಯುವ ಕಾರಣ
ಸಿಕ್ಕಿತಾಹಾ, ಪಾಣಿ ಲವಲಿಯ ತಳಿರಿನಂತಿದೆ ಕೋಮಲ. ೪೦

(ಎಂದು ಹಿಡಿದುಕೊಳ್ಳುವನು)

ಸೀತೆ—ಅಯ್ಯೋ, ಅಯ್ಯೋ; ಆರ್ಯಪುತ್ರನ ಸ್ಪರ್ಶದಿಂದ ಪರವಶಳಾದ ನಾನು ಪ್ರಮಾದವೆಸಗಿಬಿಟ್ಟೆ!

ರಾಮ—ಸಖಿ, ವಾಸಂತಿ, ಆನಂದದಿಂದ ಇಂದ್ರಿಯಗಳೆಲ್ಲವೂ ನಿಷ್ಕ್ರಿಯವಾಗಿಬಿಟ್ಟಿವೆ. ಕಾತರದಿಂದ ಪರವಶನಾಗಿದ್ದೇನೆ. ನೀನೇ ಸ್ವಲ್ಪ ಈಕೆಯನ್ನು ಬಿಡದೆ ಹಿಡಿದುಕೊ.

ವಾಸಂತಿ—ಅಯ್ಯೋ ಕಷ್ಟ, ಇದು ನಿಜವಾಗಿಯೂ ಹುಚ್ಚೇ.

(ಸೀತೆ ಗಾಬರಿಯಿಂದ ಕೈಬಿಡಿಸಿಕೊಂಡು ಹೋಗುವಳು)

ರಾಮ—ಅಯ್ಯೋ, ಪ್ರಮಾದವಾಯಿತು :—

ಜಡವೆನೆ ನಡುಗುವ ಬೆವರಿರ್ದೆನ್ನಯ
ಕೈಯಿಂ ಜಾರಿತು ತಟ್ಟನೆಯೆ;
ಆಕೆಯ ಕರಪಲ್ಲವವದು ತಾನೂ
ಜಡವೆನೆ ನಡುಗುತ ಬೆವರಿರಲು. ೪೧

ಸೀತೆ—ಅಯ್ಯೋ, ಇನ್ನೂ ಅವನ ದೃಷ್ಟಿ ತಳಮಳಿಸುತ್ತ ಮರವಟ್ಟು ತೇಲಾಡುತ್ತಲೇ ಇದೆ. ಇನ್ನೂ ಅವನು ಸರಿಯಾಗಿ ಸಮಾಧಾನಕ್ಕೆ ಬಂದಿಲ್ಲ.

ತಮಸೆ (ಸ್ನೇಹ, ಕೌತುಕ, ಸ್ಮಿತಗಳಿಂದ ನೋಡಿ)—

ಸ್ವೇದ ರೋಮಾಂಚನದೆ ಕಂಪಿಸುತಿರ್ಪಳೀಕೆಯು ವತ್ಸೆಯು,
ಪ್ರಿಯನ ಸೋಂಕಿನ ಸುಖದೊಳು;
ಗಾಳಿಯಲುಗಿಸೆ, ಮಳೆಯು ನೆನೆಯಿಸೆ, ಮೊಗ್ಗನೊಯ್ಯನೆ ತಳೆಯುವ
ಕೊಂಬೆಯಂತೆ ಕದಂಬದ. ೪೨

ಸೀತೆ (ಸ್ವಗತ)—ಈ ನನ್ನ ಪರವಶವಾದ ಆತ್ಮ ತಮಸೆಯೆದುರಿಗೆ ನಾನು ನಾಚುವಂತೆ ಮಾಡಿತು. ಅವಳು ನಿಜವಾಗಿಯೂ ಏನೆಂದುಕೊಂಡಾಳು—ಅಂತಹ ಪರಿತ್ಯಾಗ, ಇಂತಹ ಅನುರಾಗ!

ರಾಮ (ಸುತ್ತಲೂ ನೋಡಿ)—ಏನು ನಿಜವಾಗಿಯೂ ಇಲ್ಲವೇ? ಆಹಾ, ನಿಷ್ಕರುಣೆಯಾದ ವೈದೇಹಿ,—

ಸೀತೆ—ಈ ಸ್ಥಿತಿಯಲ್ಲಿ ನಿನ್ನನ್ನು ನೋಡಿಯೂ ಬದುಕಿರುವ ನಾನು ನಿಷ್ಕರುಣಳೇ ನಿಜ.

ರಾಮ—ಎಲ್ಲಿರುವೆ, ದೇವಿ, ಪ್ರಸನ್ನಳಾಗು. ಹೀಗೆ ನನ್ನನ್ನು ಬಿಟ್ಟುಹೋಗುವುದು ನಿನಗೆ ತರವಲ್ಲ.

ಸೀತೆ—ಆರ್ಯಪುತ್ರ, ನಿನ್ನ ಮಾತು ತಿರುಗುಮುರುಗಾಗಿರುವಂತೆ ತೋರುತ್ತದೆ.

ವಾಸಂತಿ—ದೇವ, ಶಾಂತನಾಗು. ಎಲ್ಲೆ ಮೀರಿ ಹೋಗುತ್ತಿರುವ ನಿನ್ನ ಆತ್ಮವನ್ನು ನಿನ್ನದೇ ಆದ ಲೋಕೋತ್ತರ ಧೈರ್ಯದಿಂದ ತಡೆದುಕೋ. ನನ್ನ ಪ್ರೀತಿಯ ಸಖಿ ಇಲ್ಲೆಲ್ಲಿ ಬರಬೇಕು?

ರಾಮ—ಇಲ್ಲವೆನ್ನುವುದೇ ನಿಜವೆಂದಾಯಿತು. ಅಲ್ಲದಿದ್ದರೆ ವಾಸಂತಿ ಆಕೆಯನ್ನು ಕಾಣದೆ ಹೋಗುತ್ತಿದ್ದಳೆ? ಒಂದು ವೇಳೆ ನಾನು ಕಂಡದ್ದು ಕನಸೋ ಏನೋ! ಆದರೆ ನಾನು ನಿದ್ದೆಯೇ ಮಾಡಿರಲಿಲ್ಲ. ರಾಮನಿಗೆ ನಿದ್ದೆ ಎಲ್ಲಿಂದ ಬರಬೇಕು? ಎಂದಮೇಲೆ ಮತ್ತೆ ಮತ್ತೆ ನಾನು ಕಲ್ಪನೆ ಕಾಣುತ್ತ ಸೃಷ್ಟಿಸಿರುವ ಭ್ರಾಂತಿಯೇ ಹೀಗೆ ನನ್ನನ್ನು ಕಾಡುತ್ತಿದೆಯೆಂದು ತಿಳಿಯಬೇಕಾಯಿತು.

ಸೀತೆ—ದಾರುಣಳಾದ ನಾನೇ ಆರ್ಯಪುತ್ರನನ್ನು ವಂಚಿಸಿದ್ದೇನೆ.

ವಾಸಂತಿ—ದೇವ, ನೋಡು—

ಆ ಜಟಾಯುವು ಮುರಿದ ಕಬ್ಬಿಣ ರಥವಿದೇ ಪೌಲಸ್ತ್ಯನ,
ಇಲ್ಲೆ ಮುಂಗಡೆ ದೆವ್ವಮೋರೆಯ ಕತ್ತೆಯೆಲುಬುಗಳಿರ್ಪುವು;
ಕಡಿದು ರೆಕ್ಕೆಗಳನ್ನು ಹಕ್ಕಿಯ, ಜ್ವಲಿಪ ಸೀತೆಯನುಯ್ಯುತೆ
ಮಿಂಚು ಹೊಳೆಯುವ ಮೋಡವೆಂದೆನೆ ಪಗೆಯು ನೆಗೆದನು ನಭಕಿದೋ. ೪೩

ಸೀತೆ (ಭಯದಿಂದ)—ಆರ್ಯಪುತ್ರ, ತಾತನು ಹತನಾಗುತ್ತಾನೆ; ನಾನು ಅಪಹೃತಳಾಗುತ್ತಿದ್ದೇನೆ. ಆದ್ದರಿಂದ ಕಾಪಾಡು.

ರಾಮ (ಜಗ್ಗನೆದ್ದು)—ಆ ಪಾಪಿ, ತಾತನ ಪ್ರಾಣದ ಮತ್ತು ಸೀತೆಯ ಅಪಹಾರಕ, ಎಲ್ಲಿ ಹೋಗುವೆ?

ವಾಸಂತಿ—ದೇವ, ರಾಕ್ಷಸಕುಲದ ಪ್ರಲಯಧೂಮಕೇತುವಾದ ನಿನಗೆ ಇನ್ನು ಕೋಪಕ್ಕೆ ವಿಷಯ ಉಳಿದಿದೆಯೆ?

ಸೀತೆ—ಆಹಾ, ನಾನೂ ಭ್ರಾಂತಳಾದೆ.

ರಾಮ—ಈಗೆಂದರೆ ಮತ್ತೊಂದು ವಿಪರ್ಯಾಸವೊದಗಿದೆ—

ಇರಲುಪಾಯವು ಸದ್ವಿನೋದಗಳಂತೆ ಸಂತತವೊದಗಲು,
ಪಗೆಗಳೊಂದಿಗೆ ಯುದ್ಧಗೈಯುತೆ ಲೋಕಕಚ್ಚರಿಯಾಗಿರೆ,
ಪ್ರಿಯೆಯ ವಿರಹಕೆ ಅಂದು ಇರ್ದುದು ವೈರಿನಾಶದ ಅವಧಿಯು
ಇಂದು ನಿರವಧಿ, ನಿಷ್ಪ್ರತಿಕ್ರಿಯವೆಂತು ಕಮ್ಮನೆ ಸಹಿಪೆನು. ೪೪

ಸೀತೆ—ನಿರವಧಿಯೆಂದನೇ! ಅಯ್ಯೋ ಮಂದಭಾಗಿನಿಯಾದ ನಾನು ಕೆಟ್ಟೆ.

ರಾಮ—ಅಯ್ಯೋ, ಕಷ್ಟ; ಪ್ರಿಯೆ,

ವ್ಯರ್ಥವೆಲ್ಲಿ ಕಪೀಂದ್ರಸಖ್ಯವು, ವ್ಯರ್ಥ ಕಪಿಗಳ ವೀರ್ಯವು,
ಜಾಂಬವಂತನ ಮತಿಯುಮೆಲ್ಲಿಗೆ ವಾಯುಪುತ್ರನು ಪಾರನೋ;
ವಿಶ್ವಕರ್ಮಕುಮಾರ ನಲನೂ ಮಾರ್ಗಗೈಯನೊ ಎಲ್ಲಿಗೆ,
ಎಲ್ಲಿ ಲಕ್ಷ್ಮಣಬಾಣ ಸಾಗದೊ, ಅಲ್ಲಿ ಪೋದೆಯದೆಲ್ಲಿಗೆ? ೪೫

ಸೀತೆ—ಆಹಾ, ನನ್ನ ಮೊದಲ ವಿರಹವು ಎಷ್ಟು ಬಹುಮಾನಾಸ್ಪದ!

ರಾಮ—ಸಖಿ, ವಾಸಂತಿ, ಈಗ ರಾಮನ ದರ್ಶನ ಮಿತ್ರರಿಗೆ ದುಃಖವನ್ನು ಮಾತ್ರ ತರುತ್ತದೆ. ನಿನ್ನನ್ನು ಎಷ್ಟು ಹೊತ್ತು ಗೋಳಾಡಿಸಲಿ? ಆದ್ದರಿಂದ ನಾನಿನ್ನು ಹೋಗಿಬರಲು ಅಪ್ಪಣೆ ಕೊಡು.

ಸೀತೆ (ಉದ್ವೇಗದಿಂದ ತಮಸೆಯನ್ನಪ್ಪಿಕೊಂಡು)—ಭಗವತಿ ತಮಸೆ, ಆರ್ಯಪುತ್ರನು ಹೊರಟುಹೋಗಿಬಿಡುತ್ತಾನೆ! (ಮೂರ್ಛೆ ಹೋಗುವಳು)

ತಮಸೆ—ಮಗಳೆ, ಸಂತೈಸಿಕೊ, ಸಂತೈಸಿಕೊ. ಈಗ ನಾವೂ ಮಕ್ಕಳ ವರ್ಷ ವರ್ಧಂತಿಯ ಮಂಗಳಕಾರ್ಯಗಳನ್ನು ನೆರವೇರಿಸಲು ಭಾಗೀರಥಿಯ ಬಳಿಗೆ ಹೋಗೋಣ.

ಸೀತೆ—ಭಗವತಿ, ಮನ್ನಿಸು. ದುರ್ಲಭದರ್ಶನನಾದ ಇವನನ್ನು ಇನ್ನೊಂದು ಕ್ಷಣ ನೋಡಿ ಬರುತ್ತೇನೆ.

ರಾಮ—ಈಗ ಅಶ್ವಮೇಧಯಾಗಕ್ಕೆ ಸಹಧರ್ಮಚಾರಿಣಿಯೂ ಉಂಟು.

ಸೀತೆ (ನಡುಗುತ್ತ)—ಆರ್ಯಪುತ್ರ, ಯಾರವಳು?

ರಾಮ—ಸೀತೆಯ ಚಿನ್ನದ ಪ್ರತಿಮೆ.

ಸೀತೆ (ನಿಟ್ಟುಸಿರು, ಕಣ್ಣೀರುಗಳಿಂದ)—ಆರ್ಯಪುತ್ರ, ಈಗ ನೀನೇ ಹೌದೆನ್ನುವಂತಾದೆ. ಈಗ ನೀನು ನನ್ನ ಪರಿತ್ಯಾಗವೆಂಬ ಲಜ್ಜಾಕಂಟಕವನ್ನು ಕಿತ್ತೆಸೆದಂತಾಗಿದೆ.

ರಾಮ—ಅದನ್ನು ನೋಡಿಯಾದರೂ ಕಣ್ಣೀರಿಂದ ತುಂಬಿದ ನನ್ನ ಕಣ್ಣನ್ನು ಸಂತೈಸುತ್ತೇನೆ.

ಸೀತೆ—ಆರ್ಯಪುತ್ರನಿಂದ ಇಷ್ಟು ಬಹುಮಾನಕ್ಕೆ ಪಾತ್ರಳಾದ ಆ ಪ್ರತಿಮಾಪತ್ನಿಯೇ ಧನ್ಯೆ. ಆಕೆಯೇ ಆರ್ಯಪುತ್ರನನ್ನು ಸಂತೈಸುತ್ತ ಜಗತ್ತಿನ ಆಶೆಗೊಂದು ಆಧಾರವಾಗಿದ್ದಾಳೆ.

ತಮಸೆ (ಸ್ಮಿತ ಸ್ನೇಹಾಶ್ರುಗಳಿಂದ)—ಮಗಳೇ, ನಿನ್ನನ್ನು ನೀನೇ ಶ್ಲಾಘಿಸಿಕೊಳ್ಳುತ್ತಿರುವೆ!

ಸೀತೆ (ನಾಚಿಕೆಯಿಂದ ತಲೆತಗ್ಗಿಸಿ, ಸ್ವಗತ)—ದೇವಿ ನನ್ನನ್ನು ಹಾಸ್ಯಮಾಡುತ್ತಿದ್ದಾಳೆ.

ವಾಸಂತಿ—ದರ್ಶನ ಕೊಟ್ಟುದೇ ನಮ್ಮ ಮೇಲೆ ದೊಡ್ಡ ಅನುಗ್ರಹವಾಯಿತು. ಇನ್ನು ಹೊರಡುವ ವಿಷಯದಲ್ಲಿ ನಿನ್ನ ಕಾರ್ಯಹಾನಿಯಾಗದಂತೆ ನಡೆಯಬಹುದು.

ಸೀತೆ—ಈಗ ವಾಸಂತಿಯೂ ನನಗೆ ಪ್ರತಿಕೂಲೆಯಾಗಿಬಿಟ್ಟಳು.

ತಮಸೆ—ಮಗಳೆ, ಬಾ, ಇನ್ನು ಹೋಗೋಣ.

ಸೀತೆ (ಕಷ್ಟದಿಂದ)—ಆಗಲಿ.

ತಮಸೆ—ಹೋಗುವುದು ಹೇಗೆ? ಈಗ—

ನಿನ್ನ ತೃಷ್ಣಾದೀರ್ಘ ನೋಟವು
  ಬಿಗಿದು ನೆಟ್ಟಿರೆ ಪ್ರಿಯನೊಳು,
ಮರ್ಮಭೇದಕವೆಂದೆನಿಪ್ಪುದು
  ಅದನು ಕದಲಿಸಲೊಡರಿಸೆ. ೪೬

ಸೀತೆ—ಅಪೂರ್ವಪುಣ್ಯದಿಂದ ದರ್ಶನವೊದಗಿದ ಆರ್ಯಪುತ್ರನ ಚರಣಕಮಲಗಳಿಗೆ ನಮೋನಮಃ! (ಮೂರ್ಛೆ ಹೋಗುವಳು).

ತಮಸೆ—ವತ್ಸೆ, ಸಂತೈಸಿಕೊ, ಸಂತೈಸಿಕೊ.

ಸೀತೆ (ಸಂತೈಸಿಕೊಂಡು)—ಮೋಡಗಳ ನಡುವಿರುವ ಹುಣ್ಣಿಮೆ ಚಂದ್ರನನ್ನು ಎಷ್ಟು ಹೊತ್ತು ಒಂದೇ ಸಮವಾಗಿ ನೋಡಬಹುದು?

ತಮಸೆ—ಅಹಾ ಏನು ಘಟನೆಗಳ ಸಂವಿಧಾನ ?—

ಒಂದೆ ಕರುಣದ ರಸ ನಿಮಿತ್ತದ ಭೇದವೊದಗಲು ಭೇದವ
ಬೇರೆ ಬೇರೆನಿಪಂತೆ ತಳೆಯುತೆ ವಿಕೃತಿಪಡೆವುದದೆಂತೆನೆ ;
ಸುಳಿಯು ಬೊಬ್ಬುಳಿಯಲೆಯು ಮುಂತಾದೆಲ್ಲ ವಿಕೃತಿಯನುದಕವು
ತಳೆವುದಾದೊಡೆ ಆ ಸಮಸ್ತವು ಸಲಿಲವೊಂದೇ ಅಪ್ಪುದು. ೪೭

ರಾಮ—ಓ, ವಿಮಾನರಾಜ, ಇತ್ತ ಹೋಗು.

(ಎಲ್ಲರೂ ಏಳುವರು)

ತಮಸೆವಾಸಂತಿಯರು (ಸೀತಾರಾಮರನ್ನು ಕುರಿತು)—

ಪೃಥ್ವಿ, ಭಾಗೀರಥಿಯು, ದೇವತೆಗಳೆಮ್ಮಂತೆ,
ಆದಿಕವಿ ಕುಲಪತಿಯು ವಾಲ್ಮೀಕಿಯು ;
ಆ ಅರುಂಧತಿಯೊಡನೆ ತಾಂ ವಸಿಷ್ಠಮುನೀಂದ್ರ-
ನಿಂತೆಲ್ಲ ನಿನಗಿಂದು ಶುಭವೀಯಲಿ. ೪೮

ಇಲ್ಲಿಗೆ "ಛಾಯಾ" ಎಂಬ ಮೂರನೆಯ ಅಂಕ

ಮುಗಿದುದು

# ನಾಲ್ಕನೆಯ ಅಂಕ

(ಇಬ್ಬರು ತಾಪಸಬಾಲಕರ ಪ್ರವೇಶ)

ಒಬ್ಬ—ಸೌಧಾತಕಿ, ಈ ದಿನ ಬಹಳ ಜನ ಅತಿಥಿಗಳು ಬಂದಿರುವುದರಿಂದ ಗುರುಗಳಾದ ವಾಲ್ಮೀಕಿಗಳ ಆಶ್ರಮದಲ್ಲಿ ಸಂಭ್ರಮದಿಂದ ಜರುಗುತ್ತಿರುವ ಸಮಾರಂಭಗಳು ಎಷ್ಟು ರಮಣೀಯವಾಗಿವೆ, ನೋಡು :—

ಹುಲ್ಲೆ ನೀವಾರಗಳ ಬಿಸಿಯು ಸವಿಗಂಜಿಯನು
  ಈಂದಿನಿಯಳುಂಡ ಬಳಿಕೀಂಟುತಿದೆ ಮನದಣಿಯೆ ;
ಕೂಡೆ ತುಪ್ಪದೊಳಡುವ ಕಂಪು, ಕರ್ಕಂಧುಫಲ-
  ಮಿಶ್ರಶಾಕದ ಪಾಕಪರಿಮಳವು ಪಸರಿಸಿದೆ. ೧

ಸೌಧಾತಕಿ—ನಮಗೆ ರಜ ಕೊಡಿಸಿರುವ ಬೇರೆ ಬೇರೆ ಹಣ್ಣುಗಡ್ಡೆಗಳಿಗೆಲ್ಲ ಸುಸ್ವಾಗತ !

ಒಬ್ಬ (ನಗುತ್ತಾ)—ಸೌಧಾತಕಿ, ಹಿರಿಯರಲ್ಲಿ ನಿನಗೆ ಗೌರವವಿರುವುದಕ್ಕೆ ಕಾರಣ ಅಪೂರ್ವವಾಗಿದೆ !

ಸೌಧಾತಕಿ—ದಾಂಡಾಯನ, ಈ ಮುದುಕರ ಗುಂಪಿನ ಮುಂದಾಳಾಗಿ ಬಂದಿರುವ ಅತಿಥಿಯ ಹೆಸರೇನು ?

ದಾಂಡಾಯನ—ಹಾಸ್ಯವನ್ನು ನಿಲ್ಲಿಸು. ಋಷ್ಯಶೃಂಗನ ಆಶ್ರಮದಿಂದ ಅರುಂಧತಿಯೊಡನೆ ದಶರಥಮಹಾರಾಜನ ಮಡದಿಯರನ್ನು ಕರೆದುಕೊಂಡು ಬಂದಿರುವ ಪೂಜ್ಯ ವಸಿಷ್ಠನೇ ಆತನಲ್ಲವೇ ? ಹೀಗೇಕೆ ಹರಟುವೆ ?

ಸೌಧಾತಕಿ—ಏನು ? ವಸಿಷ್ಠನೆ ?

ದಾಂಡಾಯನ—ಹೌದು.

ಸೌಧಾತಕಿ—ಹುಲಿಯೋ, ತೋಳವೋ ಬಂದಿದೆಯೆಂದು ಮಾಡಿದ್ದೆ.

ದಾಂಡಾಯನ—ನಿನ್ನ ಅರ್ಥವೇನು ?

ಸೌಧಾತಕಿ—ಏಕೆಂದರೆ, ಬಂದು ತಲಪಿದ್ದೇ ತಡ, ಆ ಬಡಪ್ರಾಣಿ ಕೆಂದಕರುವನ್ನು ತೀರಿಸಿಬಿಟ್ಟ.

ದಾಂಡಾಯನ—ಮಾಂಸಸಮೇತವಾದ ಮಧುಪರ್ಕವನ್ನು ಕೊಡಬೇಕೆಂಬ ವೇದವಾಕ್ಯವನ್ನು ಪುರಸ್ಕರಿಸಿ ಗೃಹಸ್ಥರು ಅಭ್ಯಾಗತನಾಗಿ ಬಂದ ಶ್ರೋತ್ರಿಯನಿಗೆ ಕರುವನ್ನೋ, ದೊಡ್ಡ ಎತ್ತನ್ನೋ, ಇಲ್ಲವೆ ದೊಡ್ಡ ಆಡನ್ನೋ ಕೊಯ್ಯುತ್ತಾರೆ. ಇದು ಧರ್ಮವೆಂದು ಧರ್ಮಸೂತ್ರಕಾರರೇ ಹೇಳಿದ್ದಾರೆ.

ಸೌಧಾತಕಿ—ಓ, ನೀನು ಸಿಕ್ಕಿಬಿದ್ದೆ.

ದಾಂಡಾಯನ—ಹೇಗೆ?

ಸೌಧಾತಕಿ—ವಸಿಷ್ಠ ಋಷಿಗಳು ಬಂದೊಡನೆ ಕರುವನ್ನು ಕೊಯ್ದಾಯಿತು; ಆದರೆ ಇವತ್ತೇ ಆಗಮಿಸಿದ ರಾಜರ್ಷಿ ಜನಕನಿಗೆ ಗುರುಗಳಾದ ವಾಲ್ಮೀಕಿಗಳು ಮೊಸರು, ಜೇನುಗಳ ಮಧುಪರ್ಕವನ್ನು ಮಾತ್ರ ಇತ್ತರು. ಕರುವನ್ನು ಹಾಗೆಯೇ ಬಿಟ್ಟರು.

ದಾಂಡಾಯನ—ಮಾಂಸಭೋಜನವನ್ನು ಬಿಡದವರಿಗೆ ಋಷಿಗಳು ವಿಧಿಸಿರುವುದು ಹೀಗೆ. ಪೂಜ್ಯನಾದ ಜನಕನಾದರೋ ಮಾಂಸವನ್ನು ಬಿಟ್ಟವನು.

ಸೌಧಾತಕಿ—ಯಾವ ಕಾರಣಕ್ಕಾಗಿ?

ದಾಂಡಾಯನ—ಸೀತಾದೇವಿಗೆ ಒದಗಿದ ದುರ್ದೈವವನ್ನು ಕೇಳಿದ ಕ್ಷಣವೇ ಆತನು ವೈಖಾನಸನಾಗಿಬಿಟ್ಟನು. ಅವನು ಚಂದ್ರದ್ವೀಪದ ತಪೋವನದಲ್ಲಿ ತಪಸ್ಸಿಗಾರಂಭಿಸಿ ಈಗಾಗಲೇ ಎಷ್ಟೋ ವರ್ಷಗಳು ಕಳೆದಿವೆ.

ಸೌಧಾತಕಿ—ಹಾಗಾದರೆ ಇಲ್ಲಿ ಬಂದಿರುವುದೇಕೆ?

ದಾಂಡಾಯನ—ಹಳೆಯ ಗೆಳೆಯನಾದ ವಾಲ್ಮೀಕಿಯ ದರ್ಶನಕ್ಕಾಗಿ.

ಸೌಧಾತಕಿ—ಬೀಗಿತಿಯರನ್ನು ಕಂಡಾಯಿತೋ ಇನ್ನೂ ಇಲ್ಲವೋ?

ದಾಂಡಾಯನ—ಇದೇ ಈಗ ವಸಿಷ್ಠರು ಕೌಸಲ್ಯೆಗೆ ಅರುಂಧತಿಯ ಕೈಯಲ್ಲಿ ಹೇಳಿಕಳುಹಿಸಿದ್ದಾರೆ—'ನೀನೇ ಬಂದು ಜನಕನನ್ನು ಕಾಣಬೇಕು' ಎಂದು.

ಸೌಧಾತಕಿ—ಈ ಮುದುಕರು ಪರಸ್ಪರ ಕೂಡಿಕೊಂಡಂತೆ, ನಾವೂ ಕೂಡ ಜತೆಯ ಹುಡುಗರೊಡನೆ ಕೂಡಿಕೊಂಡು ರಜೆಯ ಹಬ್ಬವನ್ನು ಆಡುತ್ತ ಕಳೆಯೋಣ. ಈಗ ಆ ಜನಕನಿರುವುದೆಲ್ಲಿ?

ದಾಂಡಾಯನ—ನೋಡು, ಬ್ರಹ್ಮವಾದಿಯೂ ಪುರಾಣ ರಾಜರ್ಷಿಯೂ ಆದ ಜನಕನು ವಾಲ್ಮೀಕಿವಸಿಷ್ಠರನ್ನು ವಂದಿಸಿಯಾದಮೇಲೆ ಈಗ ಆಶ್ರಮದ ಹೊರಗೆ ಮರದ ಕೆಳಗಿದ್ದಾನೆ; ಈತನೋ—

ಹೃದಯದೊಳೆಂದೂ ಬಿಡದಾವರಿಸಿಹ
ಸೀತಾಶೋಕದೆ ತಪಿಸುವನು;
ಒಳಗಿಂದೊಳಗೇ ಬೆಂಕಿಯು ಸೇರಲು
ಕವರುವ ಮುದಿಮರದಂತಿವನು. ೨

(ನಿಷ್ಕ್ರಮ—ಇಬ್ಬರೂ)

**ಇದು ಮಿಶ್ರ-ವಿಷ್ಕಂಭಕ**

---

(ಅನಂತರ ಜನಕನ ಪ್ರವೇಶ)

ಜನಕ—

ಮಗಳೊಳಾಪರಿಯಾದ ದುರಿತವು ಪೊರ್ದಲಗ್ಗಳ, ತೀವ್ರವು,
ಎನ್ನ ಹೃದಯವ್ರಣನಿಮಿತ್ತವು ವ್ಯಥೆಯ ಕಾರಣವಂತೆಯೆ;
ಎನ್ನೊಳುಕ್ಕಿದ ಭೂರಿಕೋಪವೆ ಇಂದಿಗೂ ಪೊಸದೆಂಬವೋಲ್
ಪರಿದು ಪೊನಲೊಲು, ಗರಗಸಂಬೋಲ್ ಮರ್ಮಗಳನೇ ಕೊಯ್ವುದು. ೩

ಅಯ್ಯೋ, ಕಷ್ಟ. ಹೀಗೆ ಮುಪ್ಪು, ಅಪಾರ ದುಃಖ, 'ಪರಾಕ,' 'ಸಾಂತಪನ' ಮುಂತಾದ ದುಷ್ಕರ ತಪೋವಿಧಿಗಳು, ಎಲ್ಲದರಿಂದಲೂ ರಸಧಾತುವೆಲ್ಲ ಬತ್ತಿದರೂ ಇನ್ನೂ ನನ್ನ ಈ ಹಾಳುದೇಹವು ಬಿದ್ದು ಹೋಗದು. ಅಂಧತಮಸ್ಸಿನಿಂದ ತುಂಬಿದ 'ಅಸೂರ್ಯ'ಗಳೆಂಬ ಲೋಕಗಳೇ ಆತ್ಮಹತ್ಯೆ ಮಾಡಿಕೊಂಡವರಿಗೆ ಗತಿಯೆಂದು ಋಷಿಗಳು ಹೇಳುತ್ತಾರೆ. ಅನೇಕ ವರ್ಷಗಳು ಕಳೆದರೂ ಯೋಚಿಸಿದ ಕ್ಷಣದಲ್ಲಿಯೇ ಮರುಕೊಳಿಸುತ್ತ ಹೊಸಹೊಸದಾಗುವ ನನ್ನ ದಾರುಣ ದುಃಖದ ವೇಗವು ಕಡಿಮೆಯೇ ಆಗುವಂತಿಲ್ಲ. ಅಮ್ಮಾ, ದೇವಯಜನಸಂಭವೆ, ಸೀತೆ, ನಿನ್ನ ಜನ್ಮದ ಪರಿಣಾಮವು ಮನಬಂದಂತೆ ಅಳುವುದಕ್ಕೂ ನಾನು ನಾಚುವಂತೆ ಆಗಿಹೋಯಿತೆ! ಅಯ್ಯೋ, ಮಗಳೇ—

ಅಳುವ ಮೇಣ್ ನಸುನಗುವ, ಕೆಲವೆ ಪಲ್ಮೊಳಕೆಗಳು
ತೊಳತೊಳಗಲಲ್ಲಲ್ಲಿ ಮುಗುಳ್ಗಳಂತೆ;
ನಿನ್ನ ಬಾಲ್ಯದೊಳೆಸೆದ ವದನಕಮಲವ ನೆನೆವೆ
ತಡವರಿಪ ತೊದಲ್ನುಡಿಯ ಸವಿಯನಂತೆ. ೪

ದೇವಿ, ಭೂಮಿತಾಯಿ, ನೀನು ನಿಜವಾಗಿಯೂ ಅತಿ ಕಠಿಣಳು—

ನೀನು, ಅಗ್ನಿ, ವಸಿಷ್ಠಪತ್ನಿಯು, ಗಂಗೆ, ಮುನಿವರರೆಲ್ಲರು
ಗುರು ವಸಿಷ್ಠನು, ದೇವ ಸೂರ್ಯನು, ಬಲ್ಲಿರಾಕೆಯ ವೈಮೆಯಂ ;
ವಾಕ್ಕು ವಿದ್ಯೆಗದೆಂತೊ ಅಂತೆಯೆ ನೀನೆ ತಾಯೆಸಲಾಕೆಗೆ
ದೇವಸಮಳಾ ಮಗಳ ಘಾತವನೆಂತು ಸಹಿಸಿದೆ ಕಠಿಣಳೇ ? ೫

(ತೆರೆಯಲ್ಲಿ)

ಪೂಜ್ಯಳೂ ಮಹಾರಾಣಿಯೂ ಇತ್ತ ಬರಬೇಕು, ಇತ್ತ ಬರಬೇಕು.

ಜನಕ (ನೋಡಿ)—(ದಶರಥನ ಕಂಚುಕಿಯಾದ) ಗೃಷ್ಟಿಯು ದಾರಿತೋರಿಸುತ್ತ ಪೂಜ್ಯೆ ಅರುಂಧತಿಯನ್ನು, ಕರೆತರುತ್ತಿದ್ದಾನೆ. (ಎದ್ದು) ಮಹಾರಾಣಿ ಯೆಂದುದು ಯಾರನ್ನಿರಬಹುದು ? (ಮತ್ತೆ ನೋಡಿ) ಹಾ, ಇದೇನು, ದಶರಥ ಮಹಾರಾಜನ ಧರ್ಮಪತ್ನಿಯೂ ನನ್ನ ಪ್ರಿಯಸಖಿಯೂ ಆದ ಕೌಸಲ್ಯೆಯೇ ಇವಳು. ಅವಳೇ ಇವಳೆಂದು ಯಾರು ತಾನೆ ನಂಬಿಯಾರು ?—

ದಶರಥನ ಮನೆಯೊಳಗೆ ಲಕ್ಷ್ಮಿಯಂತಿವಳಿರಲು,
ಲಕ್ಷ್ಮಿಯೇ ದಿಟವಹುದು, ಉಪಮೆ ತಗದು ;
ಅಯ್ಯೊ ದೈವವಿಲಾಸ ಬೇರೂರ್ವಳೆನಿಸುವಳು
ದುಃಖಮಯವಾದೊಂದು ಜಂತುವೆನಲು. ೬

ಯಾವಾಕೆ ಮೊದಲೆಸಗೆ ಮೈವೆತ್ತ ಹಬ್ಬದೊಲು
ಇರ್ದಳೋ ಅವಳ ದರುಶನವೆ ಇಂದು ;
ಉರಿಯುತಿಹ ಗಾಯದೊಳು ಉಪ್ಪನೇ ಸುರಿದಂತೆ
ಸೈರಿಸಲ್ಕಸದಳವೆ ಆಗಿರುವುದು. ೭

(ಪ್ರವೇಶ—ಅರುಂಧತಿ, ಕೌಸಲ್ಯೆ ಮತ್ತು ಕಂಚುಕಿ)

ಅರುಂಧತಿ—ನಾನು ಹೇಳುವುದು ಕೇಳಿಸಲಿಲ್ಲವೆ ? ನೀನೇ ಹೋಗಿ ಜನಕನನ್ನು ಕಾಣಬೇಕೆಂದು ಕುಲಗುರುಗಳ ಅಪ್ಪಣೆಯಾಗಿದೆ. ಅದಕ್ಕೇ ನನ್ನನ್ನು ಕಳುಹಿಸಿರುವುದು. ಹೆಜ್ಜೆಹೆಜ್ಜೆಗೂ ಹೀಗೆ ಹಿಂಜರಿಯುತ್ತಿರುವುದೇಕೆ ?

ಕಂಚುಕಿ—ದೇವಿ, ಮನಸ್ಸನ್ನು ಬಿಗಿಹಿಡಿದು, ವಸಿಷ್ಠರ ಅಪ್ಪಣೆಯನ್ನು ಪಾಲಿಸ ಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ.

ಕೌಸಲ್ಯೆ—ಇಂತಹ ಕಾಲದಲ್ಲಿ ಜನಕನನ್ನು ನಾನು ಕಾಣಬೇಕಾಗಿರುವುದರಿಂದ ನನ್ನ ದುಃಖಗಳೆಲ್ಲವೂ ಒಟ್ಟಿಗೆ ಒತ್ತರಿಸಿ ಬರುತ್ತಿವೆ. ಹೃದಯದ ಮೂಲ ಸೂತ್ರಗಳೇ ಕಿತ್ತುಬರುತ್ತಿರುವಾಗ ಬಿಗಿಹಿಡಿಯುವುದು ಶಕ್ಯವಾಗುತ್ತಿಲ್ಲ.

ಅರುಂಧತಿ—ಸಂಶಯವೇ ಇಲ್ಲ—

ನಂಟರಗಲಿಕೆಯಿಂದೆ ಬಂದು ತೆರೆತೆರೆಯಾಗಿ
ದುಃಖಗಳು ಜನರಲ್ಲಿ ಮರುಕೊಳಿಸುತೆ;
ಪ್ರಿಯಜನರ ಕಂಡೊಡನೆ ತಡೆಯಲರಿದೆಂದೆನಿಸಿ
ಕೋಡಿ ಸಾಸಿರವಾಗಿ ಪೊನಲ್ವರಿವುವು. ೮

ಕೌಸಲ್ಯೆ—ವತ್ಸೆಯಾದ ಸೊಸೆಗೆ ಹಾಗಾದಮೇಲೆ ಅವಳ ತಂದೆ ರಾಜರ್ಷಿಗೆ ಈಗ ಹೇಗೆ ಮುಖವನ್ನು ತೋರಿಸುವುದು?

ಅರುಂಧತಿ—ಇವನೆ ನಿಮ್ಮಯ ಮಾನ್ಯಬಂಧುವೀತನೆ ಜನಕ-
ಕುಲದೊಳಗೆ ನೋಡಲ್ಕೆ ಅಗ್ರಗಣ್ಯ;
ಈತಂಗೆ ಮುನಿ ಯಾಜ್ಞವಲ್ಕ್ಯನೇ ತಾನಂದು
ಬ್ರಹ್ಮಪಾರಾಯಣವನೊರೆದನಲ್ತೆ. ೯

ಕೌಸಲ್ಯೆ—ಆ ಮಹಾರಾಜನಿಗೆ ಎರಡನೆಯ ಹೃದಯವೇ ಎನಿಸಿದವನೂ, ಸೊಸೆಯ ತಂದೆಯೂ ಆದ ರಾಜರ್ಷಿ ಸೀರಧ್ವಜನೇ ಇವನು. ಅಕಟ-ಕಟಾ! ಯಾವ ನೋವೂ ಇಲ್ಲದೆ ರಮಣೀಯವಾಗಿದ್ದ ಆ ದಿನಗಳ ನೆನಪು ಬರುತ್ತಿದೆ. ಅಯ್ಯೋ, ದೈವವೆ, ಅದೆಲ್ಲವೂ ಇಂದು ಇಲ್ಲವಾಗಿದೆ.

ಜನಕ (ಸಮೀಪಿಸಿ)—ಭಗವತಿ ಅರುಂಧತಿ, ವಿದೇಹರಾಜ್ಯದ ಸೀರಧ್ವಜನು ನಮಸ್ಕರಿಸುತ್ತಿದ್ದಾನೆ—

ಅಂತಪ್ಪ ಪರಿಪೂತ ತೇಜಗಳ ನಿಧಿಯಪ್ಪ
ಪೂರ್ವಗುರುಗಳಿಗೆಲ್ಲ ಪರಮಗುರುವಪ್ಪ;
ನಿನ್ನ ಪತಿಯೇ ತಾನು ನಿನ್ನಿಂದ ಪೂತನೆನೆ
ಮೂಜಗಕೆ ಮಂಗಳವ ತೋರುತಿಹ ನಿನಗೆ;
ಆ ಉಷಾದೇವಿಯೊಲು ಲೋಕವಂದ್ಯೆ, ಪವಿತ್ರೆ,
ನೆಲದೊಳಗೆ ತಲೆಯಿಟ್ಟು ಕೈಮುಗಿವೆನು. ೧೦

ಅರುಂಧತಿ—ಅಕ್ಷರವಾದ ಜ್ಯೋತಿ ನಿನಗೆ ಬೆಳಗಲಿ. ರಜೋದೂರನಾಗಿ ಬೆಳಗುತ್ತಿರುವ ಸೂರ್ಯದೇವನು ನಿನ್ನನ್ನು ಪಾವನಗೊಳಿಸಲಿ.

**ಜನಕ**—ಅಯ್ಯಾ, ಗೃಷ್ಟಿ, ಪ್ರಜಾಪಾಲಕನ ತಾಯಿಗೆ ಕ್ಷೇಮವಷ್ಟೆ!

**ಕಂಚುಕಿ** (ಸ್ವಗತ)—ನಿಶ್ಶೇಷವಾಗಿಯೂ, ನಿಷ್ಠುರವಾಗಿಯೂ ನಮ್ಮನ್ನು ನಿಂದಿಸಿದಂತಾಯಿತು. (ಪ್ರಕಾಶ) ರಾಜರ್ಷಿಯೆ, ಇದೇ ಸಂಕಟದಿಂದ ರಾಮಭದ್ರನ ಮುಖದರ್ಶನವನ್ನೇ ಎಷ್ಟೋ ಕಾಲದಿಂದ ಮಾಡದಿರುವ ಅತಿ ದುಃಖಿತೆಯಾದ ದೇವಿಯನ್ನು ಮತ್ತೂ ಸಂಕಟಪಡಿಸುವುದು ನಿನಗೆ ತರವಲ್ಲ. ರಾಮಭದ್ರನಿಗೂ ಏನೋ ಒಂದು ದೈವದ ದುರ್ಯೋಗವೇ ಸರಿ. ಅವನು ಹಾಗೆ ದಾರುಣವಾಗಿ ಆಚರಿಸುವುದಕ್ಕೆ ಎಲ್ಲೆಲ್ಲೂ ಬಹು ಸಂಖ್ಯಾತರಾದ ಪೌರಜಾನಪದರು ಅಸಹ್ಯವಾದ ಅಪವಾದವನ್ನು ಆಡಿಕೊಳ್ಳುತ್ತ ಅಗ್ನಿಶುದ್ಧಿಯನ್ನೂ ನಂಬದಿದ್ದುದೇ ನಿಮಿತ್ತವಂತೆ.

**ಜನಕ** (ರೋಷದಿಂದ)—ಆ, ಏನೆಂದೆ? ನಮ್ಮ ಮಗಳನ್ನು ಪರಿಶುದ್ಧಮಾಡುವುದಕ್ಕೆ ಅಗ್ನಿ ಎಲ್ಲಿಯವನು! ಅಯ್ಯೋ, ಕಷ್ಟ. ಹೀಗೆ ಹೇಳುವ ಇವನು ರಾಮಭದ್ರನಿಂದ ಆಗಲೇ ಅವಮಾನಿತರಾದ ನಮ್ಮನ್ನು ಮತ್ತೊಮ್ಮೆ ಅವಮಾನ ಮಾಡುತ್ತಿದ್ದಾನೆ.

**ಅರುಂಧತಿ** (ನಿಟ್ಟುಸಿರು ಬಿಡುತ್ತ)—ಹೌದು, ಹಾಗೆಯೇ ಆಯಿತು. ವತ್ಸೆಯ ವಿಷಯದಲ್ಲಿ ಅಗ್ನಿಯೆನ್ನುವುದೂ ಹೀನಾಯವೇ. ಸೀತೆಯೆಂದು ಹೇಳುವುದೇ ಸಾಕು. ಅಯ್ಯೋ, ವತ್ಸೆ—

> ಶಿಶುವೊ ಶಿಷ್ಯೆಯೊ ಎನಗೆ ನೀನೇನಾದೆಯೋ ಅದು ಪೋಗಲಿ,
> ನಿನ್ನ ಪರಿಶುದ್ಧತೆಯು ಪೆರ್ಮೆಯಿನಾದೆ ನಿನ್ನಯ ಭಕ್ತೆಯಾಂ;
> ಬಾಲ್ಯ ಪೆಣ್ತನಮೇನೆ ಇರೆಯುಂ ನೀನು ತ್ರಿಜಗದ್ವಂದ್ಯಳೇ,
> ಗುಣವೆ ಗುಣಿಗಳ ಪೂಜೆಗಾಸರೆ ಲಿಂಗವಯಸುಗಳಲ್ಲವು. ೧೧

**ಕೌಸಲ್ಯೆ**—ಅಹಾ, ನೋವುಗಳೆಲ್ಲವೂ ಕೆರಳುವಂತಿದೆ. (ಮೂರ್ಛೆ ಹೋಗುವಳು)

**ಜನಕ**—ಅಯ್ಯೋ, ಕಷ್ಟ, ಇದೇನು!

**ಅರುಂಧತಿ**—ರಾಜರ್ಷಿಯೆ, ಮತ್ತೇನು—

> ಆ ರಾಜನಾ ಸೌಖ್ಯವಾ ಮಕ್ಕಳಾ ದಿನಗ-
> ಳೆಲ್ಲವನು ನೆನೆನೆನೆದು ಬಂಧು ನೀಂ ಕಾಣೆ;
> ಘೋರವಿದು ಸೈರಿಸದೆ ಮುಚ್ಚೆವೋದಳು ರಾಣಿ,
> ಕುಸುಮಕೋಮಲವಲ್ತೆ ಪೆಂಡಿರಾ ಹೃದಯ. ೧೨

ಜನಕ—ಅಯ್ಯೋ, ಅಯ್ಯೋ, ನಾನು ಕಟುಕನಾದೆನಲ್ಲ! ಎಷ್ಟೋ ಕಾಲಕ್ಕೆ ಕಂಡ ಪ್ರಿಯಮಿತ್ರನ ಪ್ರಿಯಪತ್ನಿಯನ್ನು ಸ್ನೇಹದಿಂದಲೂ ನೋಡಲಿಲ್ಲ.

ನಂಟ ಮೆಚ್ಚಿನ, ಕೆಳೆಯು ಸೆಚ್ಚಿನ, ಎನ್ನ ಹೃದಯವೆ ಹೆಚ್ಚಿನ,
ಅವನೆ ಮತ್ತಾನಂದವೆನ್ನಯ, ನಿಖಿಲ ಜೀವಿತ ಸುಫಲವು ;
ಅವನೆ ದೇಹವು ಅವನೆ ಜೀವವು ಅವನೆ ಸಕಲೇಷ್ಟಾರ್ಥವು—
ಎನಲು ದಶರಥರಾಜನೆನಗಂದೇನನೆನಿಸದೆಯಿರ್ದನು? ೧೩

ಕಷ್ಟ, ಇವಳೇ ಆ ಕೌಸಲ್ಯೆ—

ಈ ಗಂಡಹೆಂಡಿರೊಳು ಗೋಪ್ಯ ತಪ್ಪುಗಳುದಿಸೆ
ಇರ್ವರೂ ದೂರ ತರುತಿರ್ದರೆನ್ನೆಡೆಗೆ ;
ಕೋಪವೋ ಸಾಂತ್ವನವೊ ಎನ್ನದೆನೆ ಆ ಬಳಿಕ,
ಎದೆಯುರಿಪ ಆ ಸ್ಮೃತಿಯನಿನ್ ನೆನೆಯಲೇಕೆ? ೧೪

ಅರುಂಧತಿ—ಅಯ್ಯೋ ಕಷ್ಟ. ಬಹಳ ಹೊತ್ತಾದರೂ ಉಸಿರು ಕಟ್ಟಿಯೇ ಇದೆ; ಹೃದಯವೂ ಸ್ಪಂದಿಸುವುದಿಲ್ಲ.

ಜನಕ—ಅಯ್ಯೋ, ಪ್ರಿಯಸಖಿ! (ಕಮಂಡಲುವಿನ ನೀರನ್ನು ಚಿಮುಕಿಸುತ್ತಾನೆ.)

ಕಂಚುಕಿ— ಒಳ್ಳಿತನೆಸಗುವ ನೇಹಿಗನೆಂಬೊಲು
ಮೊದಲೊಳು ಸುಖವೊಂದನೆ ತೋರಿ;
ತಟ್ಟನೆ ಬದಲಿಪ ದಾರುಣ ವಿಧಿಯಿದು
ಮನದುಮ್ಮಳವನೆ ಬಳೆಯಿಪುದು. ೧೫

ಕೌಸಲ್ಯೆ (ಸಂತೈಸಿಕೊಂಡು)—ಅಯ್ಯೋ ಮಗಳೆ, ಜಾನಕಿ, ಎಲ್ಲಿರುವೆ? ಮದುವೆಯಾದ ಹೊಸದರಲ್ಲಿ ಅಪೂರ್ವ ಸೊಬಗೇರಿ, ಬೆಳಗುವ ಬೆಳ್ನಗೆಯಿಂದ ಕೂಡಿದ, ಆ ನಿನ್ನ ಮುಗ್ಧ ಮುಖಪುಂಡರೀಕವನ್ನು ಈಗಲೂ ನೆನೆಯುತ್ತೇನೆ. ಪೂರ್ಣಚಂದ್ರನ ಚಂದ್ರಿಕೆಯಂತೆ ಸುಂದರವಾದ ನಿನ್ನ ಅಂಗಗಳಿಂದ ಮತ್ತೊಮ್ಮೆ ನನ್ನ ತೊಡೆಯನ್ನು ಬೆಳಗು ಬಾ ಮಗಳೆ. ಯಾವಾಗಲೂ ಮಹಾರಾಜನು ಹೇಳುತ್ತಿರಲಿಲ್ಲವೆ—'ರಘುಕುಲದ ಪೂರ್ವಜರಿಗೆ ಈಕೆ ಸೊಸೆ; ನಮಗೆ ಮಾತ್ರ, ಜನಕಸುತೆ ಮಗಳೇ,' ಎಂಬುದಾಗಿ.

ಕಂಚುಕಿ—ದೇವಿ ಹೇಳುವುದು ನಿಜ—

ಮಕ್ಕಳನೈವರ ಪೆತ್ತಿಹ ತಂದೆಗೆ
ರಾಮನೆ ಅತಿಶಯ ಪ್ರಿಯನೆನಲು ;
ಸೀತೆಯೆ ನಾಲ್ವರು ಸೊಸೆಯಂದಿರೊಳು
ಪ್ರೀತಿಯ ಕುವರಿಯು ಶಾಂತೆಯೊಲು. ೧೬

ಜನಕ—ಹಾ, ಪ್ರಿಯಮಿತ್ರ, ಮಹಾರಾಜ, ದಶರಥ, ಹೀಗೆ ಎಲ್ಲ ರೀತಿಯಿಂದಲೂ ಹೃದಯಂಗಮನಾಗಿದ್ದೆ. ನಿನ್ನನ್ನು ಮರೆಯುವುದೆಂತು ?

ಅಳಿಯನಾಪ್ತರ ಪೂಜೆಗೈವರು ಪೆಣ್ಣ ಪೆತ್ತವರಿಳೆಯೊಳು,
ನಮ್ಮ ನಂಟದು ಬೇರೆಯಾದುದು, ನೀನೆ ಪೂಜಿಸಲೆನ್ನನು ;
ಅಂಥ ನಿನ್ನನೆ ಎಮ್ಮ ನಂಟಿನ ಬೀಜದೊಂದಿಗೆ ಕಾಲನು
ಉಯ್ಯಲೆಂತೀ ಘೋರ ನರಕದೊಳಿಳಿಯೊಳಿರ್ಪನು ಪಾಪಿಯು. ೧೭

ಕೌಸಲ್ಯೆ—ಮಗಳೆ, ಜಾನಕಿ, ಏನು ಮಾಡಲಿ ? ದೃಢವಾದ ವಜ್ರಲೇಪದಿಂದ ಬೆಸೆದಿಟ್ಟಂತೆ ಅಂಟಿಕೊಂಡಿರುವ ಹಾಳು ಜೀವ ಮಂದಭಾಗಿನಿಯಾದ ನನ್ನನ್ನು ಬಿಟ್ಟುಹೋಗುವುದಿಲ್ಲ.

ಅರುಂಧತಿ—ರಾಜಪುತ್ರಿ, ಸಂತೈಸಿಕೊ. ಮಧ್ಯದಲ್ಲಿ ಒಮ್ಮೆಯಾದರೂ ಅಳುವಿಗೆ ವಿಶ್ರಾಂತಿ ಕೊಡಬೇಕು. ಅಲ್ಲದೆ ಋಷ್ಯಶೃಂಗಾಶ್ರಮದಲ್ಲಿ ನಿಮ್ಮ ಕುಲಗುರುಗಳು ಹೇಳಿದ್ದು ನೆನಪಿಲ್ಲವೆ ?—'ಹಾಗಾಗಬೇಕೆಂದು ವಿಧಿನಿಯಮವಿತ್ತು ; ಆಯಿತು. ಆದರೆ ಪರ್ಯವಸಾನದಲ್ಲಿ ಅದು ಶುಭಫಲವನ್ನೇ ತರುವುದು' ಎಂದು.

ಕೌಸಲ್ಯೆ—ಹತಾಶಳಾದ ನನಗೆ ಅದು ನಿಜವಾಗುವುದೆಂತು ?

ಅರುಂಧತಿ—ಹಾಗಾದರೆ ಅದು ಸುಳ್ಳುಮಾತೆನ್ನುವಿಯಾ, ರಾಜಪುತ್ರಿ ? ಕ್ಷತ್ರಿಯ ವಂಶಜೆಯಾದ ನೀನು ಅದನ್ನು ಹಾಗೆ ತಿಳಿಯಬಾರದು. ಆ ಮಾತು ನಡೆದೇ ತೀರುವುದು.

ಆವಿರ್ಭೂತಜ್ಯೋತಿಗಳಾಗಿಹ
ವಿಪ್ರರ ನುಡಿ ಪುಸಿಯೆನಬೇಡ ;
ಇವರ್ಗಳ ನುಡಿಯೊಳು ಶುಭ ಸಿರಿ ನಿಲ್ವಳು
ಇವರಾಡರು ಪುಸಿನುಡಿಗಳನು. ೧೮

(ತೆರೆಯಲ್ಲಿ ಕೋಲಾಹಲ, ಎಲ್ಲರೂ ಆಲಿಸುತ್ತಾರೆ)

ಜನಕ—ಓ, ಈ ಹೊತ್ತು ಶಿಷ್ಟರ ಆಗಮನದ ನಿಮಿತ್ತ ರಜೆ ಬಂದಿತೆಂದು ತಡೆಬಡೆಯಿಲ್ಲದೆ ಆಟವಾಡುವ ವಟುಗಳ ಕೋಲಾಹಲ!

ಕೌಸಲ್ಯೆ—ಬಾಲ್ಯವೆಂಬುದು ಬಹು ಸುಲಭವಾಗಿ ಸೌಖ್ಯವನ್ನು ಕೊಡುತ್ತದೆ. ಅಹಾ, ಇವರ ನಡುವೆ ರಾಮಭದ್ರನ ತಾರುಣ್ಯಲಕ್ಷ್ಮಿಯನ್ನು ಹೋಲುವ, ಗಂಭೀರ ಮಧುರವಾದ ಅಂಗಗಳಿಂದ ಕಣ್ಗೆ ತಂಪೀಯುವ, ಇವನಾರು?

ಅರುಂಧತಿ (ಅಪವಾರಿತ, ಹರ್ಷಬಾಷ್ಪಗಳಿಂದ)—ಭಾಗೀರಥಿ ಹೇಳಿದ ರಹಸ್ಯ ಅಥವಾ ಕರ್ಣಾಮೃತ ಇದೇ ಇರಬೇಕು! (ಪ್ರಕಾಶ)

ಕುವಲಯದ ದಲದಂತೆ ಶಾಮಲನು, ಮುಂಗುರುಳು<br>
ಆಭರಣದಂತೆ ಕಂಗೊಳಿಸುತಿಹುದು;<br>
ತನ್ನ ಮೈಸಿರಿಯಿಂದೆ ವಟುಗಳೀ ನೆರವಿಗಿವ<br>
ಪೊಸಸಿರಿಯನೇ ತಂದು ಕೊಡುತಲಿರುವ;<br>
ಮತ್ತೆ ರಘುನಂದನನೆ ಕಂದನಾದವೊಲಿಂತು<br>
ಕಾಣೆ, ಕಣ್ಗಮೃತವೆನಲೀತನಾರು? ೧೯

ಕಂಚುಕಿ—ಸರ್ವಥಾ, ಈ ಬಾಲಕನು ಕ್ಷತ್ರಿಯ ಬ್ರಹ್ಮಚಾರಿಯೇ ಎಂದು ನನಗೆ ಎನಿಸುತ್ತದೆ.

ಜನಕ—ಹೌದು, ನೀನು ಹೇಳುವುದು ನಿಜ. ಏಕೆಂದರೆ—

ತಲೆಯ ಸೋಂಕಿರೆ ಕಣೆಯ ಗರಿಗಳು ತೂಣಿಯೆರಡಿವೆ ಬೆನ್ನೊಳು,<br>
ಉರದೊಳೊಪ್ಪಿದೆ ಭಸ್ಮಲಾಂಛನ, ಹೊದಿಕೆ ಕೃಷ್ಣಾಜಿನವಿದು;<br>
ಕಾವಿಬಣ್ಣದ ಕೆಳಗಿನುಡುಪನು ಮೌರ್ವಿಮೇಖಲೆ ಬಿಗಿದಿದೆ,<br>
ಕೈಯಲಿರ್ಪುದು ಬಿಲ್ಲು ಜಪಸರವಂತೆ ಪಿಪ್ಪಲದಂಡವು. ೨೦

ಭಗವತಿ ಅರುಂಧತಿ, ಇವನಾರೆಂಬುದನ್ನು ಕುರಿತು ನಿನ್ನ ಊಹೆಯೇನು?

ಅರುಂಧತಿ—ನಾವು ಈ ಹೊತ್ತು ಬಂದವರು.

ಜನಕ—ಆರ್ಯಗೃಷ್ಟಿಯೆ, ನನ್ನ ಕುತೂಹಲ ಹೆಚ್ಚಾಗಿದೆ. ಆದ್ದರಿಂದ ಹೋಗಿ ವಾಲ್ಮೀಕಿ ಮಹರ್ಷಿಯನ್ನೇ ಕೇಳಿಕೊಂಡು ಬಾ. ಈ ಹುಡುಗನಿಗೂ ಹೇಳು—'ಈ ಮುದುಕರು ನಿನ್ನನ್ನು ನೋಡಬಯಸಿದ್ದಾರೆ' ಎಂದು.

ಕಂಚುಕಿ—ಅಪ್ಪಣೆ. (ನಿಷ್ಕ್ರಮ)

ಕೌಸಲ್ಯೆ—ಹೀಗೆ ಹೇಳಿದರೆ ಅವನು ಬರುವನೆಂದು ಭಾವಿಸುವಿರಾ?

ಜನಕ—ಇಂತಹ ಆಕಾರವುಳ್ಳವನಲ್ಲಿ ಸದ್ಗುಣಗಳಿರದೆ ಹೋದಾವೆ?

ಕೌಸಲ್ಯೆ—(ನೋಡಿ) ಓ, ವಿನಯಪೂರ್ವಕವಾಗಿ ಗೃಷ್ಟಿಯ ಮಾತನ್ನು ಲಾಲಿಸಿದವನೇ ಮುನಿಕುಮಾರರನ್ನು ಕಳುಹಿಸಿಬಿಟ್ಟು ಇತ್ತ ಕಡೆ ಬಾಲಕನಾಗಲೇ ಹೊರಟಿದ್ದಾನೆ.

ಜನಕ (ಚಿರಕಾಲ ನೋಡಿ)—ಅಹಾ, ಇದೇನು!

ವಿನಯ ಬಾಲ್ಯ ಮೌಗ್ಧ್ಯ ಗುಣಗಳಿಂದ ಮೆರೆವುದಿವನೊಳು
ಮೈಮೆಯಧಿಕ, ಬಲ್ಲರರಿವರರಿವರಲ್ತು ಮೂಢರು;
ಶೋಕತಪ್ತವೆನ್ನ ಚಿತ್ತವದನೆ ಭರದಿನೆಳೆವುದು
ದಪ್ಪ ಕಬ್ಬಿಣಂಗಳನ್ನೆ ಸೆಳೆವ ಸೂಜಿಗಲ್ಲೆನಲ್. ೨೧

(ಪ್ರವೇಶ—ಲವ)

ಲವ—ಇವರು ಪೂಜ್ಯರಾದರೂ ಹೆಸರು, ಕ್ರಮ, ವಂಶ, ಒಂದೂ ತಿಳಿಯದ ನಾನು ಹೇಗೆ ನಮಸ್ಕರಿಸಲಿ? (ಯೋಚಿಸಿ) ಇದು ನಿರ್ದುಷ್ಟವಾದ ಪ್ರಕಾರವೆಂದು ಹಿರಿಯರಿಂದ ಕೇಳಿದ್ದೇನೆ. (ವಿನಯದಿಂದ ಸಮೀಪಿಸಿ) ತಮ್ಮೆಲ್ಲರಿಗೂ, ಕ್ರಮವಾಗಿ, ಇದೋ ಲವನು ತಲೆವಾಗಿ ನಮಸ್ಕರಿಸಿದ್ದಾನೆ.

ಅರುಂಧತಿ ಮತ್ತು ಜನಕ—ಮಂಗಳಕರನೆ, ಆಯುಷ್ಮಂತನಾಗು.

ಕೌಸಲ್ಯೆ—ಮಗು, ಚಿರಜೀವಿಯಾಗು.

ಅರುಂಧತಿ—ಬಾ ಮಗು, (ಲವನನ್ನು ತೊಡೆಯಮೇಲೆತ್ತಿಕೊಂಡು, ಸ್ವಗತ) ಸುದೈವದಿಂದ ನನ್ನ ತೊಡೆಯೊಂದೇ ಅಲ್ಲ, ಮನೋಥರವೂ ಕೂಡ ಪರಿಪೂರ್ಣವಾಯಿತು.

ಕೌಸಲ್ಯೆ—ಮಗು, ನನ್ನ ಹತ್ತಿರವೂ ಬಾ (ತೊಡೆಯ ಮೇಲೆತ್ತಿಕೊಂಡು) ಅಹಾ, ನಸುಬಿರಿದ ನೈದಿಲೆಯಂತೆ ನೀಲವಾದ ಮೈಕಟ್ಟಿನಿಂದ ಮಾತ್ರವಲ್ಲ, ತಾವರೆಯ ಕೇಸರವನ್ನು ಮೆದ್ದು ಇಂಪಾದ ಹಂಸದ ಇನಿದನಿಯಂತೆ ಪಸರಿಸುವ ಸ್ವರದಿಂದಲೂ ರಾಮಭದ್ರನನ್ನೇ ಹೋಲುತ್ತಾನೆ. ಪೂರ್ಣವಾಗಿ ಅರಳಿದ ಕಮಲದ ಒಳಭಾಗದಂತೆ ಕೋಮಲವಾಗಿರುವ ಮಗುವಿನ ಮೈಸೋಂಕೂ ಹಾಗೆಯೇ ಇದೆ. ಮಗುವೆ, ನಿನ್ನ ಮುಖಪದ್ಮವನ್ನು

ತೋರಿಸು! (ಗಲ್ಲವನ್ನೆತ್ತಿ ನಿಟ್ಟಿಸಿ, ಬಾಷ್ಪ, ಆವೇಗಗಳಿಂದ) ರಾಜರ್ಷಿಯೆ, ಸೂಕ್ಷ್ಮವಾಗಿ ಪರೀಕ್ಷಿಸಿದರೆ ಇವನ ಮುಖವು ಸೊಸೆಯ ಮುಖಪದ್ಮವನ್ನೇ ಹೋಲುವುದು ಕಾಣುವುದಿಲ್ಲವೇ?

ಜನಕ—ನನಗೂ ಕಾಣಿಸುತ್ತಿದೆ. ಸಖಿ, ನನಗೂ ಕಾಣಿಸುತ್ತಿದೆ.

ಕೌಸಲ್ಯೆ—ಓ, ನನ್ನ ಹೃದಯವು ಹುಚ್ಚುಹಿಡಿದಂತೆ ಇವನನ್ನು ಕುರಿತು ಏನೇನೋ ಹರಟುತ್ತಿದೆ.

ಜನಕ—

ಈ ಬಾಲನೊಳು ಮಗಳ ಮೇಣ್ ರಾಮನಂಗಗಳು
ಪ್ರತಿಬಿಂಬದಂತೀಗ ಮಾರ್ಪೊಳೆವುವು;
ಅದೆ ನೋಡಲಾಕೃತಿಯು ಅದೆ ದೇಹಕಾಂತಿಯೆನೆ,
ಅದೆ ನುಡಿಯ ಸರವಹುದು, ಅದುವೆ ವಿನಯ;
ಅದೆ ಮತ್ತೆ ಪುಣ್ಯಾನುಭಾವವೂ ಆಗಿಹುದು,
ಅಕಟಕಟ, ದೈವವೇ, ಎನ್ನ ಮನವು
ದಿಕ್ಕುದಿಕ್ಕಿಗೆ ಹುಚ್ಚು ಹುಚ್ಚಾಗಿ ದಡಮೀರಿ
ಏಕಿಂತು ಓಡುತಿದೆ ತೋರಿದಂತೆ? ೨೨

ಕೌಸಲ್ಯೆ—ಮಗುವೆ, ನಿನಗೆ ತಾಯಿಯಿರುವಳೆ? ತಂದೆಯ ನೆನಪುಂಟೆ?

ಲವ—ಇಲ್ಲ, ಇಲ್ಲ,

ಕೌಸಲ್ಯೆ—ಹಾಗಾದರೆ ನೀನು ಯಾರ ಹುಡುಗ?

ಲವ—ಭಗವಾನ್ ವಾಲ್ಮೀಕಿಗಳ ಹುಡುಗ.

ಕೌಸಲ್ಯೆ—ಮಗುವೇ, ಹೇಳಬೇಕಾದ್ದನ್ನು ಹೇಳಪ್ಪಾ.

ಲವ—ನನಗೆ ಗೊತ್ತಿರುವುದು ಇಷ್ಟೇ.

(ತೆರೆಯಲ್ಲಿ)

ಎಲೈ ಸೈನಿಕರೇ, ಕುಮಾರ ಚಂದ್ರಕೇತುವಿನ ಅಪ್ಪಣೆಯಿದು—'ಯಾರೂ ಆಶ್ರಮ ಸಮೀಪದ ಪ್ರದೇಶಗಳನ್ನು ಅತಿಕ್ರಮಿಸಕೂಡದು' ಎಂದು.

ಅರುಂಧತಿ ಮತ್ತು ಜನಕ—ಓ, ಯಜ್ಞಾಶ್ವದ ರಕ್ಷಣೆಗಾಗಿ ಬಂದಿರುವ ಚಂದ್ರಕೇತುಕುಮಾರನನ್ನು ಕಾಣಬಹುದಾದ ಈ ದಿನವೇ ಸುದಿನ.

ಕೌಸಲ್ಯೆ—ವತ್ಸ ಲಕ್ಷ್ಮಣನ ಮಗನು ಅಪ್ಪಣೆ ಮಾಡುವನೆಂಬ ಮಾತೇ ಕಿವಿಗೆ ಅಮೃತಪ್ರಾಯವಾಗಿದೆ.

ಲವ—ಆರ್ಯ, ಚಂದ್ರಕೇತುವೆಂಬ ಈತನಾರು ?

ಜನಕ—ದಶರಥನ ಮಕ್ಕಳಾದ ರಾಮಲಕ್ಷ್ಮಣರು ನಿನಗೆ ಗೊತ್ತುಂಟೋ ?

ಲವ—ಅವರೇ ರಾಮಾಯಣದ ಕಥಾಪುರುಷರಲ್ಲವೆ ?

ಜನಕ—ಹೌದು.

ಲವ—ಹಾಗಾದರೆ ಗೊತ್ತಿಲ್ಲದೆ ಹೋಗುವುದು ಸಾಧ್ಯವೆ ?

ಜನಕ—ಅದೇ ಆ ಲಕ್ಷ್ಮಣನ ಮಗನೇ ಚಂದ್ರಕೇತು.

ಲವ—ಊರ್ಮಿಳೆಯ ಮಗನು ರಾರ್ಷಿಯಾದ ಮಿಥಿಲೇಶನ ದೌಹಿತ್ರ.

ಅರುಂಧತಿ (ನಗುತ್ತ)—ಹುಡುಗನು ಕಥೆಯ ಪರಿಚಯವನ್ನು ಚೆನ್ನಾಗಿ ಪ್ರದರ್ಶಿಸಿದ್ದಾನೆ.

ಜನಕ (ಯೋಚಿಸಿ)—ನೀನು ಕಥೆಯನ್ನು ಅಷ್ಟು ಬಲ್ಲವನಾದರೆ ಹೇಳು ನೋಡೋಣ ; ನಾನೀಗ ಪ್ರಶ್ನೆಮಾಡುತ್ತೇನೆ—' ಆ ದಶರಥನ ಮಕ್ಕಳಿಗೆ ಎಷ್ಟು ಜನ ಮಕ್ಕಳು ? ಅವರ ಹೆಸರೇನು ? ಯಾವ ಯಾವ ಪತ್ನಿಯರಲ್ಲಿ ಜನಿಸಿದರು ? '

ಲವ—ಈ ಕಥಾಭಾಗವನ್ನು ನಾವಾಗಲಿ ಯಾರೇ ಆಗಲಿ ಇದುವರೆಗೂ ಕೇಳಿಲ್ಲ.

ಜನಕ—ಕವಿ ಹಾಗಾದರೆ ರಚಿಸಿಯೇ ಇಲ್ಲವೆ ?

ಲವ—ರಚಿಸಿದ್ದಾರೆ ; ಆದರೆ ಪ್ರಕಾಶಪಡಿಸಿಲ್ಲ. ಅದರದ್ದೇ ಒಂದು ಭಾಗವನ್ನು ರಸವತ್ತಾಗಿ ಅಭಿನಯಿಸುವಂತೆ ನಾಟಕರೂಪವಾಗಿ ಮಾಡಿದ್ದಾರೆ. ತಾವೇ ಕೈಯಲ್ಲಿ ಬರೆದ ಅದರ ಪ್ರತಿಯನ್ನು ಪೂಜ್ಯ ವಾಲ್ಮೀಕಿಗಳು ನಾಟ್ಯ ಸೂತ್ರಕಾರರಾದ ಭರತಮುನಿಗಳಿಗೆ ಕಳುಹಿಸಿದ್ದಾರೆ.

ಜನಕ—ಏತಕ್ಕಾಗಿ ?

ಲವ—ಭರತಮುನಿಗಳು ಅದನ್ನು ಅಪ್ಸರೆಯರ ಕೈಯಿಂದ ಆಡಿಸುವರಂತೆ.

ಜನಕ—ಇದೆಲ್ಲವೂ ನಮ್ಮ ಕೂತೂಹಲವನ್ನೇ ಹೆಚ್ಚಿಸುತ್ತಿದೆ.

ಲವ—ವಾಲ್ಮೀಕಿಗಳಿಗೆ ಅದರಲ್ಲಿ ವಿಶೇಷ ಆಸ್ಥೆ. ಏಕೆಂದರೆ ಆ ಪುಸ್ತಕವನ್ನು ಶಿಷ್ಯರ ಕೈಯಲ್ಲಿ ಕೊಟ್ಟು ಭರತಾಶ್ರಮಕ್ಕೆ ಕಳುಹಿಸಿದ್ದಲ್ಲದೆ ದಾರಿಯಲ್ಲಿ

ತೊಂದರೆಯಾಗದಂತೆ ಅವರನ್ನು ನೋಡಿಕೊಳ್ಳುವುದಕ್ಕೆಂದು ಚಾಪಪಾಣಿಯಾದ ನಮ್ಮ ಸೋದರನನ್ನೂ ಕಳಿಸಿದ್ದಾರೆ.

ಕೌಸಲ್ಯೆ—ಮಗು, ನಿನಗೆ ಸೋದರನೂ ಇರುವನೇ ?

ಲವ—ಇರುವನು ; ಆರ್ಯ ಕುಶನೆಂದು ಹೆಸರು.

ಕೌಸಲ್ಯೆ—ಅಣ್ಣನೆಂದು ಹೇಳಿದಂತಾಯಿತು.

ಲವ—ಹೌದು. ಪ್ರಸವಕಾಲದ ಕ್ರಮವನ್ನು ಲಕ್ಷಿಸಿದರೆ ಅವನು ಅಣ್ಣನಂತೆ.

ಜನಕ—ನೀವಿಬ್ಬರೂ ಅವಳಿಜವಳಿಗಳೇನು ?

ಲವ—ಹೌದು.

ಜನಕ—ಮಗು, ಹೇಳು—ಕಥಾಭಾಗದ ಕಡೆಯ ಸಂಗತಿಯೇನು ?

ಲವ—'ಪೌರರ ಮಿಥ್ಯಾಪವಾದದಿಂದ ಉದ್ವಿಗ್ನನಾದ ರಾಜನು ದೇವಯಜನಸಂಭವೆಯಾದ ಸೀತಾದೇವಿಯನ್ನು ಅಟ್ಟಿಬಿಟ್ಟಮೇಲೆ ಲಕ್ಷ್ಮಣನು ಏಕಾಕಿನಿಯಾದ ಆಕೆಯನ್ನು ಪ್ರಸವವೇದನೆ ಸಮೀಪಿಸುತ್ತಿರುವಾಗಲೇ ಅರಣ್ಯದಲ್ಲಿ ಪರಿತ್ಯಜಿಸಿ ಹಿಂತಿರುಗಿದನು.'

ಕೌಸಲ್ಯೆ—ಅಯ್ಯೋ, ಮಗಳೆ, ಮುಗ್ಧಚಂದ್ರಮುಖಿ, ನಿನ್ನ ಶರೀರಕುಸುಮಕ್ಕೆ ಇದ್ದಕ್ಕಿದ್ದಂತೆ ಎಂತಹ ದೈವದುರ್ವಿಲಾಸವೊದಗಿತು, ಅದೂ ಏಕಾಕಿನಿಯಾಗಿರುವಾಗ!

ಜನಕ—ಅಯ್ಯೋ, ಮಗಳೆ—

ನಿನಗಂದು ಪರಿಭವವು ಮತ್ತೆ ಘೋರಾಟವಿಯು
ಪ್ರಸವವೇದನೆಯೊಡನೆ ಸಮನಿಸಿರಲು
ಕಾಡುಮೃಗಗಳೆ ನಿನ್ನ ಸುತ್ತಿ ಸುಳಿಯಲ್ಕಂಜಿ
ಪಿರಿದೆನ್ನ ನೆನೆದಿರುವೆ ಕಾವುದೆಂದು. ೨೩

ಲವ (ಅರುಂಧತಿಯನ್ನು ಕುರಿತು)—ಆರ್ಯೆ, ಇವರಿಬ್ಬರೂ ಯಾರು ?

ಅರುಂಧತಿ—ಈಕೆ ಕೌಸಲ್ಯೆ, ಈತ ಜನಕ.

(ಲವನು ಬಹುಮಾನ, ಖೇದ, ಕೌತುಕಗಳಿಂದ ಅವರನ್ನು ನೋಡುವನು)

ಜನಕ—ಅಬ್ಬಾ ! ದುರಾತ್ಮರಾದ ಪೌರರ ನಿರ್ದಯತೆಯೆಷ್ಟು ! ರಾಜನಾದ ರಾಮನ ದುಡುಕೆಷ್ಟು—

ಇಂತೀ ಕಾರ್ಯದ ವಜ್ರಘೋರಪತನಾವೇಗಂಗಳಂ ಕಂಡಿರಲ್
ಸಂದೀಪ್ತಂ ಮಮ ಕೋಪವಹ್ನಿ ಪರಿಗುಂ ಚಾಪಕ್ಕೆ ಶಾಪಕ್ಕೆ ಮೇಣ್

**ಕೌಸಲ್ಯೆ** (ಭಯದಿಂದ ನಡುಗುತ್ತ)—ಭಗವತಿ, ಕಾಪಾಡು, ಕಾಪಾಡು, ಕುಪಿತನಾದ ರಾಜರ್ಷಿಯನ್ನು ಶಾಂತನಾಗಿಸು.

**ಲವ**—ಇಂತೀ ಭಂಗಿತರಪ್ಪ ಮಾನಯುತರಾ ಚಿತ್ತಂಗಳಿರ್ಕುಂ ದಿಟಂ.

**ಅರುಂಧತಿ**—ರಾಜನ್, ರಾಮನೆ ನಿನ್ನ ಪುತ್ರನವರುಂ ಪಾಲ್ಯರ್ ಸುದೀನರ್ ಜನರ್. ೨೪

**ಜನಕ**—ಮತ್ತಾ ರಾಘವನಲ್ಲಿ ಮಾಣಲೆರಡುಂ ಸತ್ಪುತ್ರರತ್ನಾತ್ಮನೊಳ್
ಭೂಯಿಷ್ಠ ದ್ವಿಜ ಬಾಲ ವೃದ್ಧ ವಿಕಲ ಸ್ತ್ರೈಣರ್ ವಲಂ ಪೌರರುಂ. ೨೫

(ಪ್ರವೇಶ—ಗಾಬರಿಯಲ್ಲಿರುವ ವಟುಗಳು)

**ವಟುಗಳು**—ಕುಮಾರ, 'ಕುದುರೆ,' 'ಕುದುರೆ' ಎಂದು ಜನಪದಗಳಲ್ಲಿ ಹೇಳುವುದಿಲ್ಲವೆ, ಆ ಪ್ರಾಣಿವಿಶೇಷವನ್ನು ಇಂದು ನಾವು ಕಣ್ಣಾರೆ ಕಂಡೆವು.

**ಲವ**—'ಕುದುರೆ'ಯೆಂಬುದನ್ನು ಪಶುವರ್ಗದಲ್ಲೂ ಯುದ್ಧವರ್ಗದಲ್ಲೂ ಎರಡರಲ್ಲೂ ಓದಿದ್ದೇವೆ. ಅದು ಹೇಗಿದೆ ಹೇಳಿ.

**ವಟುಗಳು**—ಕೇಳು—

ದೊಡ್ಡ ಬಾಲವ ಹಿಂದೆ ಹೊಂದಿದೆ, ಬಿಡದೆಯಲ್ಲಾಡಿಸುತಿದೆ,
ಕತ್ತು ಉದ್ದವದಕ್ಕೆ ನಾಲ್ಕೇ ಗೊರಸು ಕಾಲೊಳಗಿರ್ಪುದು;
ಹುಲ್ಲ ಮೆಲ್ವುದು ಹಿಕ್ಕೆ ಮಾವಿನ ಹಣ್ಣು ಗಾತ್ರದ ಉಂಡೆಯು
ಪೇಳಲೇತಕೆ, ದೂರ ಪೋಪುದು, ಹೊರಡು ಹೊರಡೈ ಪೋಗುವ. ೨೬

(ಎಂದು ಕೃಷ್ಣಾಜಿನವನ್ನೂ ಕೈಗಳನ್ನೂ ಹಿಡಿದೆಳೆಯುವರು)

**ಲವ** (ಕುತೂಹಲ, ಅಪರಾಧಭಯ, ವಿನಯಗಳೊಂದಿಗೆ)—ಪೂಜ್ಯರೆ, ನೀವೇ ನೋಡಿ. ಇವರು ಎಳೆದುಕೊಂಡು ಹೋಗುತ್ತಿದ್ದಾರೆ. (ಬೇಗ ಹೋಗುವನು.)

**ಅರುಂಧತಿ ಮತ್ತು ಜನಕ**—ಮಗು ಕುತೂಹಲವನ್ನು ತಣಿಸಿಕೊಳ್ಳಲಿ.

**ಕೌಸಲ್ಯೆ**—ಅರಣ್ಯಾನುಗುಣವಾದ ರೂಪದಿಂದಲೂ ಸಲ್ಲಾಪದಿಂದಲೂ ಇವನು ನಮ್ಮೆಲ್ಲರಿಗೂ ಆನಂದವನ್ನೇ ತಂದನು. ಭಗವತಿ, ಇವನನ್ನು ಕಾಣದೆ ಏನನ್ನೋ ಕಳೆದುಕೊಂಡವಳಂತೆ ಕಾತರಳಾಗಿದ್ದೇನೆ. ಆದ್ದರಿಂದ ಅತ್ತ ಹೋಗಿ ಓಡುತ್ತಿರುವ ಹುಡುಗನನ್ನು ಕಣ್ತುಂಬ ನೋಡೋಣ.

(ಪ್ರವೇಶ—ಕಂಚುಕಿ)

ಕಂಚುಕಿ—ಭಗವಾನ್ ವಾಲ್ಮೀಕಿಗಳು ಹೇಳುತ್ತಾರೆ—ಕಾಲವೊದಗಿದಾಗ ತಮಗೆ ಇದು ತಿಳಿಯಬರುವುದು, ಎಂದು.

ಜನಕ—ಇದೇನೋ ಅತಿಗೂಢವೇ ಸರಿ. ಭಗವತಿ ಅರುಂಧತಿ, ಸಖಿ ಕೌಸಲ್ಯೆ, ಆರ್ಯಗೃಷ್ಟಿ, ನಾವೇ ಸ್ವಂತವಾಗಿ ಹೋಗಿ ಭಗವಾನ್ ವಾಲ್ಮೀಕಿಯನ್ನು ಕಾಣೋಣ.

(ನಿಷ್ಕ್ರಮ—ವೃದ್ಧವರ್ಗ)

(ಪ್ರವೇಶ—ವಟುಗಳು)

ವಟುಗಳು—ಕುಮಾರನು ಆಶ್ಚರ್ಯವನ್ನು ನೋಡಬೇಕು.

ಲವ—ನೋಡಿಯೂ ಆಯಿತು; ತಿಳಿದೂ ಆಯಿತು. ಇದು ಅಶ್ವಮೇಧ ಯಜ್ಞದ ಕುದುರೆ.

ವಟುಗಳು—ಹೇಗೆ ತಿಳಿದೆ?

ಲವ—ಅಯ್ಯೋ, ಮೂರ್ಖರೆ, ನೀವೂ ಆ ಕಾಂಡವನ್ನು ಓದಿಲ್ಲವೆ? ಇದರ ಕಾಪಿಗಾಗಿ ನೂರು ನೂರು ಜನ ಕವಚಧಾರಿಗಳೂ, ದಂಡಧಾರಿಗಳೂ, ಬಿಲ್ಲಾಳುಗಳೂ ಕಾಣುವುದಿಲ್ಲವೆ? ಈ ಸೈನ್ಯದಲ್ಲೆಲ್ಲ ಇದೇ ಕಾಣುತ್ತಿದೆ. ನಂಬದಿದ್ದರೆ ನೀವೇ ಹೋಗಿ ಕೇಳಿಕೊಂಡು ಬನ್ನಿ.

ವಟುಗಳು—ಏತಕ್ಕಾಗಿ ಈ ಕುದುರೆ ಕಾಪಿನಲ್ಲಿ ಸಂಚರಿಸುತ್ತದೆ?

ಲವ (ಅಸೂಯೆಯಿಂದ ಸ್ವಗತ)—ಆಹಾ, ಅಶ್ವಮೇಧಯಾಗವೆಂಬುದು ವಿಶ್ವವಿಜಯಿಗಳಾದ ಕ್ಷತ್ರಿಯರಿಗೆ ಎಲ್ಲಕ್ಕೂ ಹೆಚ್ಚಿನ ಪ್ರತಾಪೋತ್ಕರ್ಷದ ಒರೆಗಲ್ಲು; ಮಿಕ್ಕ ಕ್ಷತ್ರಿಯರನ್ನೆಲ್ಲ ಪರಾಭವಿಸುವ ಪ್ರತೀಕ.

(ತೆರೆಯಲ್ಲಿ)

ಇದೋ ಕುದುರೆಯೇ ಪತಾಕೆಯಂತೆ ವೀರಘೋಷಣೆ;
ಸಪ್ತಲೋಕದೇಕವೀರನಾದ ರಾವಣಾರಿಗೆ. ೨೭

ಲವ (ಗರ್ವದಿಂದಲೋ ಎಂಬಂತೆ)—ಆಹಾ, ಒಂದೊಂದು ಮಾತೂ ಉದ್ದೀಪಕವಾಗಿದೆ.

ವಟುಗಳು—ನಾವು ಹೇಳುವುದೇನು? ಕುಮಾರನಿಗೆ ಎಲ್ಲವೂ ಗೊತ್ತು.

ಲವ—ಏ, ಯಾರು ನೀವು, ಹೀಗೆ ಘೋಷಿಸುವಿರಲ್ಲಾ, ಪೃಥ್ವಿಯಲ್ಲಿ ಕ್ಷತ್ರಿಯರೇ ಯಾರೂ ಇಲ್ಲವೇನು?

(ತೆರೆಯಲ್ಲಿ)

ಎಲ ಎಲಾ, ನಮ್ಮ ಮಹಾರಾಜನ ಮುಂದೆ ಕ್ಷತ್ರಿಯರೆಲ್ಲಿಂದ ಬರಬೇಕು?

ಲವ—ನೀಚರೇ, ನಿಮ್ಮನ್ನು ಸುಡಲಿ.

ಇರುವೊಡವರು ಇರುವರಲ್ತೆ, ಏಕೆ ಈ ವಿಭೀಷಿಕೆ?
ಸುಡಿಯಲೇಕೆ, ನೋಡಿ ನಿಮ್ಮ ಆ ಪತಾಕೆಯುಯ್ವೆನು. ೨೮

ಏ ವಟುಗಳೇ, ಈ ಕುದುರೆಯನ್ನು ಸುತ್ತುಗಟ್ಟಿ ಕಲ್ಲುಗಳಿಂದ ಹೊಡೆದು ಕೊಂಡು ಹೋಗಿ. ಈ ಬಡಪ್ರಾಣಿ ಕಾಡ ಜಿಂಕೆಗಳೊಂದಿಗೆ ಮೇಯಲಿ.

(ಪ್ರವೇಶ—ಬಂಟ)

ಬಂಟ (ಕೋಪದರ್ಪಗಳಿಂದ)—ದುಡುಕುವುದು ಸಾಕು. ಏನೆಂದೆ? ಈ ತೀಕ್ಷ್ಣತರವಾದ ಆಯುಧಪಾಣಿಗಳ ಪಡೆಗಳು ಮಕ್ಕಳ ಗರ್ವೋಕ್ತಿಯನ್ನು ಕೂಡ ಸೈರಿಸವು. ರಾಜಕುಮಾರ ಚಂದ್ರಕೇತುವೆಂದರೆ ಅಪ್ರತಿಹತನಾದ ಯೋಧ ಅಪೂರ್ವವಾದ ಅರಣ್ಯಸೌಂದರ್ಯವನ್ನು ನೋಡಲು ಹೋಗಿರುವ ಅವನು ಮರಳುವುದರೊಳಗಾಗಿ ಈ ಮರಗಳ ಪೊದೆಯಲ್ಲಿ ಅಡಗಿ ಪಾರಾಗಿರಿ.

ವಟುಗಳು—ಕುಮಾರ, ಈ ಕುದುರೆಯ ಸಹವಾಸ ಬೇಡ. ಆಯುಧಪಾಣಿಗಳ ಈ ಪಡೆಗಳು ಹೊಳೆಯುತ್ತಿರುವ ಆಯುಧಗಳಿಂದ ಕುಮಾರನನ್ನು ಬೆದರಿಸುತ್ತಿದ್ದಾರೆ. ಸುಮ್ಮನೆ ಬಾ, ಜಿಂಕೆಯೋಟದಿಂದ ಓಡಿಬಿಡೋಣ.

ಲವ (ನಗುತ್ತ)—ಓಹೋ, ಆಯುಧಗಳು ಹೊಳೆಯುತ್ತಿವೆಯೋ? (ಎಂದು ಬಿಲ್ಲನ್ನೇರಿಸುತ್ತ)

ಹೆದೆಯು ಬಳಸೆ ದಾಡೆಯಂತೆ ನೀಳ್ದ ಬಿಲ್ಲ ತುದಿಗಳ,
ಘೋರ ಮೇಘ ಘೋಷದಂತೆ ಮೊಳಗನೊಳಗಿನೆಬ್ಬಿಸೆ;
ನುಂಗಲೆಂದು ನಗುತೆ ಮೃತ್ಯು ತೆರೆದ ಬಾಯ ಯಂತ್ರದಾ-
ಕಳಿಕೆಯನ್ನು ಪೋಲುತೀಗ ಬಿಲ್ಲಿನುದರ ಬೆಳಗಲಿ. ೨೯

(ಯಥೋಚಿತವಾಗಿ ಹೆಜ್ಜೆಯಿಡುತ್ತ ಎಲ್ಲರ ನಿಷ್ಕ್ರಮ)

ಇಲ್ಲಿಗೆ 'ಕೌಸಲ್ಯಾಜನಕಯೋಗ'ವೆಂಬ ನಾಲ್ಕನೆಯ ಅಂಕ ಮುಗಿಯಿತು.

---

## ಐದನೆಯ ಅಂಕ

(ತೆರೆಯಲ್ಲಿ)

ಎಲೈ, ಎಲೈ ಸೈನಿಕರೇ, ನಮ್ಮ ಆಲಂಬನ ಬಂದಾಯಿತು—

ತ್ವರೆಯಿಂ ಸುಮಂತ್ರನೋಡಿಸೆ
ಗುರುವೇಗಂಗೊಂಡು ಕುದುರೆಯೆಳೆಯುವ ರಥದೊಳ್
ತರಹರಿಸಲ್ ಧ್ವಜದಂಡಂ
ಪರಿತಂದಂ ಚಂದ್ರಕೇತು ಕೇಳ್ದೀ ರಣಮಂ. ೧

(ಸಾರಥಿಯಾದ ಸುಮಂತ್ರ, ರಥದಲ್ಲಿ ಧನುಷ್ಪಾಣಿಯೂ ಅದ್ಭುತ, ಹರ್ಷ, ಸಂಭ್ರಮಾನ್ವಿತನೂ ಆದ ಚಂದ್ರಕೇತು, ಇವರ ಪ್ರವೇಶ)

ಚಂದ್ರಕೇತು—ಅಯ್ಯಾ ಸುಮಂತ್ರ, ನೋಡು—

ಇನಿಸು ಕೋಪವು ಮುಖದ ಕಾಂತಿಗೆ ಕೆಂಪನೇರಿಸಲೀತನು
ಹೆದೆಯೊಳೆಡೆಯನು ಬಿಡದೆ ಗುಂಜಾರವವನುಕ್ಕಿಸೆ ಬಿಲ್ಗೊನೆ;
ರಣದ ಮುಂಚೂಣಿಯೊಳೆ ನಿಂದೈಮುಡಿಯು ಶೋಭಿಸೆ ತಲೆಯೊಳು
ಬಾಣವರ್ಷವ ಪಡೆಗೆ ಕರೆಯುವ ವೀರಬಾಲನಿದಾವನೋ? ೨

ಅಬ್ಬಾ, ಆಶ್ಚರ್ಯ :—

ಪೆರ್ವಡೆಯ ನಡುವೊರ್ವ ಮುನಿಕುವರ ನಿಂದಿರಲು
ತೋರುವನು ರಘುಕುಲದ ಪೊಸಕುಡಿಯೊ ಎನಲು;
ಘೋರಟಂಕಾರದಿಂದಾನೆತಲೆಗಳ ತರಿದು
ಉರಿಯೆ ಶರ ನೂರಾರು ಕೌತುಕವ ತಹನು. ೩

ಸುಮಂತ್ರ—ಆಯುಷ್ಮಂತನೆ,

ದೇವದಾನವರಾರ್ಪ ಮೀರಿಸಿ ಆಂತೆ ರೂಪವನಾಂತಿಹ
ರೂಪನೀಕ್ಷಿಸಿ ಬಾಲನ;
ಕುಶಿಕಸುತನಾ ಯಜ್ಞಶತ್ರುಗಳೊಡನೆ ರಣದೊಳು ಬಿಲ್ಲನು
ಸೆಳೆದ ರಾಮನ ನೆನೆವೆನು. ೪

ಚಂದ್ರಕೇತು—ಒಬ್ಬನ ಮೇಲೆ ಇಷ್ಟೊಂದು ಜನ ಹೆಣಗುವುದನ್ನು ನೋಡಿದರೆ ನನ್ನ ಮನಸ್ಸಿಗೆ ನಾಚಿಕೆಯಾಗುತ್ತದೆ ;—

ಪಾಣಿವಿಧೃತ ನಿಶಿತಶಸ್ತ್ರಜಾಲವಪ್ಪ ಪಡೆಯಿದು
ಗಂಟೆ ಝುಣಝುಣೆಂಬ ರಥಗಳಲ್ಲಿ ಕುಳಿತು ಪರಿಯುತೆ :
ಮದದ ವಾರಿಯಿಂದಕಾಲಮೇಘವೆನಿಸಲಾನೆಗಳ್
ಒರ್ವ ಬಾಲನನ್ನು ಸುತ್ತುವರಿಯಿತೆಸೆಯೆ ಕೈದುಗಳ್. ೫

ಸುಮಂತ್ರ—ಮಗು, ಇವನ ಮೇಲೆ ಎಲ್ಲರೂ ಕೂಡಿ ಬಿದ್ದರೂ ಏನಾಗಿದೆ? ಬೇರೆಬೇರೆ ಎದುರಿಸಿದ್ದರೆ ಇನ್ನೇನಾಗುತ್ತಿತ್ತೊ !

ಚಂದ್ರಕೇತು—ಪೂಜ್ಯನೆ, ತ್ವರೆ ಮಾಡು, ತ್ವರೆ ಮಾಡು. ನಮ್ಮ ಆಶ್ರಿತಜನರ ಕಗ್ಗೊಲೆಗೇ ಈತನು ಹೊರಟಿದ್ದಾನೆ. ನೋಡು—

ಗುಹೆಯೊಳಾರ್ಭಟಗೈವ ಗಜಗಳ ಕಿವಿಗೆ ಪೀಡೆಯನೊದಗಿಸಿ
ತಳ್ತ ದುಂದುಭಿರವದಿನುಬ್ಬಿರೆ ಬಿಲ್ಲ ನಾರಿಯ ಟಂಕೃತಿ ;
ನೆಲವ ಭೀಕರ ರುಂಡ ಮುಂಡಗಳಿಂದೆ ವೀರಂ ತುಂಬಿದಂ
ತೃಪ್ತಕಾಲ ಕರಾಲ ವಕ್ತ್ರದಿನುರುಳ್ವ ಗ್ರಾಸಗಳೆಂದೆನೆ. ೬

ಸುಮಂತ್ರ (ಸ್ವಗತ)—ಇಂತಹ ಪ್ರಬಲನೊಡನೆ ಕುಮಾರ ಚಂದ್ರಕೇತು ದ್ವಂದ್ವ ಯುದ್ಧಮಾಡುವುದನ್ನು ಹೇಗೆ ಅನುಮೋದಿಸುವುದು? (ಯೋಚಿಸಿ) ಏನೇ ಆದರೂ ನಾನು ಇಕ್ಷ್ವಾಕುಗಳ ಕುಲದಲ್ಲಿಯೇ ಮುಪ್ಪಾದವನಲ್ಲವೆ? ರಣವು ಉಪಸ್ಥಿತವಾಗಿರುವಾಗ ಬೇರೆ ಮಾರ್ಗವೆಲ್ಲಿ ?

ಚಂದ್ರಕೇತು (ವಿಸ್ಮಯ ಲಜ್ಜಿ ಸಂಭ್ರಮಗಳಿಂದ)—ಅಯ್ಯೋ, ಧಿಕ್ಕಾರ! ಎಲ್ಲ ಕಡೆಗಳಲ್ಲಿಯೂ ನನ್ನ ಸೇನೆಗಳು ಹಿಮ್ಮೆಟ್ಟಿವೆ.

ಸುಮಂತ್ರ (ರಥವೇಗವನ್ನು ಸೂಚಿಸಿ)—ಆಯುಷ್ಮಂತನೆ, ಇದೋ ಆ ವೀರನೊಡನೆ ನೀನು ಮಾತನಾಡುವಷ್ಟು ಸಮೀಪಕ್ಕೆ ಬಂದಾಯಿತು.

ಚಂದ್ರಕೇತು (ಮರೆತವನಂತೆ)—ಆರ್ಯ, ಆ ಕರೆಯಲು ಬಂದವರು ಇವನ ಹೆಸರನ್ನು ಏನೆಂದು ಹೇಳಿದರು ?

ಸುಮಂತ್ರ—ಲವ, ಎಂದು.

ಚಂದ್ರಕೇತು—ಎಲೆಲೇ ಶೂರನೆ ಲವನೇ, ಬಿಡುಬಿಡು

ಸಮಬಲರಲ್ಲದ ಸೈನಿಕರ ;

ನಾನಿಲ್ಲಿರುವೆನು, ಕಾದೆಸ್ನೊಡನೆ
ತೇಜವು ತೀರಲಿ ತೇಜದೊಳು. ೭

ಸುಮಂತ್ರ—ಕುಮಾರ, ನೋಡು ನೋಡು—

ಇದೊ ವೀರಬಾಲಕನು ಸೈನ್ಯಮರ್ದನವನ್ನು
ಬಿಟ್ಟು ತಿರುಗಿದನೀಗ ನೀನು ಕರೆಯೆ;
ಮೇಘಘೋಷವ ಕೇಳಿ ಗಜಘಟೆಯ ಮರ್ದನವ-
ನುಳಿದಿರ್ಪ ಮರಿಸಿಂಗವೆಂಬ ತೆರದೆ. ೮

(ಪ್ರವೇಶ—ಧೀರೋದ್ಧತನಂತೆ ನಡೆಯುವ ಲವ)

ಲವ—ಭಲೆ, ರಾಜಪುತ್ರ, ಭಲೆ, ನೀನು ಇಕ್ಷ್ವಾಕುಕುಲದವನೇ ಹೌದು. ಆದ್ದರಿಂದಲೇ ನಿನ್ನ ಕಡೆಗೆ ತಿರುಗಿದ್ದೇನೆ.

(ತೆರೆಯಲ್ಲಿ ದೊಡ್ಡ ಕಲಕಲ)

ಲವ (ಗರ್ವದಿಂದ ಹಿಂತಿರುಗಿ)—ಓ, ಸೋತರೂ ಈ ಸೇನಾಪತಿಗಳು ತಿರುಗಿ ಬಂದು ಯುದ್ಧಮಾಡುತ್ತ ನನ್ನನ್ನು ಸುತ್ತುಗಟ್ಟುತ್ತಿದ್ದಾರೆ. ನೀಚರಿಗೆ ಧಿಕ್ಕಾರ—

ಘನತುಮುಲ ಕಲಕಲವು ಪೊರಮಡುವುದೆಲ್ಲ ದೆಸೆ
ಪ್ರಲಯವಾತೋದ್ಧೂತ ಜಲವೆನಲು ಕಡಲ;
ಇದೊ ಕವಳವೆನಿಸಲದು ಶೈಲಹತಿಯಿಂದೆದ್ದ
ಬಡಬಾಗ್ನಿಯಂತುರಿವ ಕೋಪಾಗ್ನಿಗೆನ್ನ. ೯

(ವೇಗದಿಂದ ಅಡಿಯಿಡುವನು)

ಚಂದ್ರಕೇತು—ಎಲೈ ಕುಮಾರ,

ನೀನು ಅದ್ಭುತಗುಣಗಳತಿಶಯದಿಂದೆ ಪ್ರಿಯನೆನಗಾಗಿಹೆ,
ಅದರಿನೆಂಬೆನು ನೀನು ಕೆಳೆಯನೆ, ಎನ್ನದಪ್ಪುದು ನಿನ್ನದೆ;
ಸ್ವಂತ ಪರಿಜನರೊಡನೆ ಕದನಂಗೈವೆಯೇತಕೆ ಕೆಮ್ಮನೆ,
ನಿನ್ನ ದರ್ಪಕೆ ನಿಕಷ ನಾನಿದೊ ಚಂದ್ರಕೇತುವೆ ನಿಂದಿಹೆ. ೧೦

ಲವ (ಹರ್ಷಸಂಭ್ರಮಗಳಿಂದ ಹಿಂದಿರುಗಿ)—ಅಹಾ, ಮಹಾನುಭಾವನಾದ ಈ ಸೂರ್ಯವಂಶಜ ಕುಮಾರನ ವೀರಾಲಾಪವು ಪ್ರಸನ್ನಕರ್ಕಶ! ಬೇರೆ ಯೋಚನೆಯೇಕೆ, ಮುಂಚೆ ಇವನನ್ನು ಗೌರವಿಸುತ್ತೇನೆ.

(ಮತ್ತೆ ತೆರೆಯಲ್ಲಿ ಕಲಕಲ)

ಲವ (ಕೋಪಜುಗುಪ್ಸೆಗಳಿಂದ)—ಆ, ವೀರಸಂವಾದಕ್ಕೆ ಅಡ್ಡಿಯಾಗಿ ಬರುವ ಈ ಪಾಪಿಗಳು ನನ್ನನ್ನು ಮೂದಲಿಸುವಂತಿದೆ. (ಅವರೆದುರಾಗಿ ಅಡಿಯಿಡುವನು)

ಚಂದ್ರಕೇತು—ಆರ್ಯ, ದರ್ಶನೀಯವಾದ ಈ ನೋಟವನ್ನು ನೋಡು—

ದರ್ಪಕೌತುಕ ದತ್ತಲಕ್ಷ್ಯನು ಎನ್ನೊಳೀತನು ಎಂದೆನೆ,
ಹಿಂದೆ ಬೆನ್ನಟ್ಟಿರಲು ಪಡೆಗಳು, ಎತ್ತಿ ತನ್ನಯ ಬಿಲ್ಲನೆ;
ಎರಡು ಕಡೆಗೂ ಎಳೆಯೆ ಗಾಳಿಯು ಚಂಚಲತ್ವವ ತಳೆಯುವ
ಇಂದ್ರಚಾಪವನಾಂತ ಮೋಡದ ಸೊಬಗನೀತನು ಪಡೆದನು. ೧೧

ಸುಮಂತ್ರ—ಕುಮಾರನು ಮಾತ್ರ ಸ್ತಿಮಿತವಾಗಿ ಈತನನ್ನು ನೋಡಲಾಪನು; ನಾವು ವಿಸ್ಮಯದಿಂದ ಪರವಶರಾಗಿ ಬಿಟ್ಟಿದ್ದೇವೆ.

ಚಂದ್ರಕೇತು—ಎಲೈ ರಾಜರೆ,

ನೀವು ಸಂಖ್ಯಾತೀತರೊರ್ವನ, ಗಜತುರಂಗಮರಥಗತರ್
ಈ ಪದಾತಿಯ, ಕವಚಿಗಳ್ಗಡ ಮೇಧ್ಯ ಚರ್ಮವನುಟ್ಟನ;
ವಯಸಿನಿಂದಂ ಜ್ಯೇಷ್ಠರೀ ನವ ಬಾಲಕೋಮಲ ಕಾಯನ,
ಜತೆಗೆ ಕಾದಲ್ಕಿಂದು ಬಾರದೆ ನಿಮಗೆ ನಮಗೂ ನಾಚಿಕೆ? ೧೨

ಲವ (ನೊಂದು)—ಏನು, ನನ್ನ ಮೇಲೆ ಕನಿಕರವನ್ನು ತೋರಿಸುವಸೋ! (ಯೋಚಿಸಿ) ಇರಲಿ, ಕಾಲಹರಣವನ್ನು ತಪ್ಪಿಸುವುದಕ್ಕಾಗಿ ಈಗ ಜೃಂಭಕಾಸ್ತ್ರವನ್ನು ಪ್ರಯೋಗಿಸಿ ಸೈನ್ಯಗಳನ್ನೆಲ್ಲ ನಿಶ್ಚೇಷ್ಟಗೊಳಿಸುವೆನು (ಧ್ಯಾನಿಸುವನು).

ಸುಮಂತ್ರ—ಇದೇನು, ಇದ್ದಕ್ಕಿದ್ದಂತೆಯೇ ನಮ್ಮ ಸೈನ್ಯದ ಗದ್ದಲವೆಲ್ಲಾ ಅಡಗಿಹೋಯಿತು!

ಲವ—ಈಗಿನ್ನು ಈ ಮಾತುಗಾರನನ್ನು ನೋಡುತ್ತೇನೆ.

ಸುಮಂತ್ರ (ಗಡಿಬಿಡಿಯಿಂದ)—ವತ್ಸ, ಈ ಕುಮಾರನು ಜೃಂಭಕಾಸ್ತ್ರವನ್ನು ಪ್ರಯೋಗಿಸಿದಂತಿದೆ.

ಚಂದ್ರಕೇತು—ಸಂಶಯವೇಕೆ?—

ಭೀಮಮಿಶ್ರಣವೆನಲು ಮಿಂಚುತಮದೊಡ್ಡುಗಳ,
ನೆಟ್ಟ ಕಣ್ ಸೋಯುತಿದೆ ಕುಕ್ಕಿ ಕುರುಡಾಗಿ;

ಇಗೊ ಬರೆದ ಚಿತ್ರದೊಲು ಸೈನ್ಯವಿದು ನಿಷ್ಪಂದ,
ಜೃಂಭಕಾಸ್ತ್ರವೆ ದಿಟದೆ ಜೃಂಭಿಸಿಹುದಿಂತು. ೧೩

ಆಶ್ಚರ್ಯ! ಆಶ್ಚರ್ಯ!

ಪಾತಾಲೋದರ ಕುಂಜ ಪುಂಜಿತ ತಮಃಶ್ಯಾಮಂಗಳಿಂದಾಗಸಂ
ತುಂಬಿತ್ತಸ್ತ್ರಗಳಿಂದೆ ದೀಪ್ತಿಯೆಸೆಯಲ್ ಸಂತಪ್ತಲೋಹೋಪಮಂ
ಮೇಘಂ ಮೇಣ್ ಸೆಳೆಮಿಂಚು ಸಂಗಡಿಸಿರಲ್ ಕುಂಜಂಗಳೊಳ್ ವಿಂಧ್ಯದಾ
ಕೂಟಂಗಳ್ ಪರಿದಿರ್ಪವೆಂದೆನಿಸುತುಂ ಕಲ್ಪಾಂತವಾತಂಗಳಿಂ. ೧೪

ಸುಮಂತ್ರ—ಇವನಿಗೆ ಜೃಂಭಕಾಸ್ತ್ರಗಳು ಯಾರಿಂದ ಬಂದಿರಬಹುದು?

ಚಂದ್ರಕೇತು—ಭಗವಾನ್ ವಾಲ್ಮೀಕಿಗಳಿಂದಲೇ ಇರಬೇಕೆಂದು ಕಾಣುತ್ತದೆ.

ಸುಮಂತ್ರ—ಅಸ್ತ್ರಗಳ ವಿಷಯದಲ್ಲಿ ಹಾಗಾಗಲಾರದು, ವಿಶೇಷತಃ ಜೃಂಭಕಾಸ್ತ್ರಗಳ ವಿಷಯದಲ್ಲಿ. ಏಕೆಂದರೆ—

ಇವು ಕೃಶಾಶ್ವನಣುಗರೆನಲು,
ಆತನಿಂದೆ ಕೌಶಿಕಂ-
ಗೊದಗಿ, ಅವನ ಶಿಕ್ಷೆಯಿಂದೆ
ರಾಮನಲ್ಲಿ ನಿಂತುವು. ೧೫

ಚಂದ್ರಕೇತು—ಸಂಚಿತವಾದ ಸತ್ತ್ವದ ಪ್ರಕಾಶದಿಂದ ಬೇರೆ ಮಂತ್ರದರ್ಶಿಗಳೂ ಕೂಡ ತಾವಾಗಿಯೇ ಎಲ್ಲವನ್ನೂ ತಿಳಿಯಬಲ್ಲರು.

ಸುಮಂತ್ರ—ಎಚ್ಚರವಾಗಿರು. ಎದುರಾಳಿ ಅಭಿಮುಖವಾಗಿದ್ದಾನೆ.

ಕುಮಾರರಿಬ್ಬರೂ (ಒಬ್ಬರನ್ನೊಬ್ಬರು ಕುರಿತು)—ಅಹಾ ಕುಮಾರನು ಎಷ್ಟು ಸುಂದರ! (ಸ್ನೇಹ ಅನುರಾಗಗಳಿಂದ ನೋಡುತ್ತ)—

ತಾನಾಗಿ ದೊರೆಕೊಂಡ ಸಂವಾದ ಕಾರಣವೊ
ಮೇಣ್ ಗುಣಗಳತಿಶಯವೊ ಭಾವಿಸಲ್ಕೆ?
ಪೂರ್ವ ಜನ್ಮಾಂತರದೊಳೊದಗಿ ಬೆಳೆದೈತಂದ
ನಿಬಿಡಪರಿಚಯವಹುದೊ ನೋಡಲಥವಾ;
ಬಗೆಗೆ ಬಾರದ ತೆರದೆ ಬಿದಿಯೆ ತಾಂ ಮರೆಸಿರುವ
ತಾನಾವುದೋ ರಕ್ತಸಂಬಂಧವೋ?

ಏನೊ ಕಾಣೆನು ನಾನು, ಆದೊಡಿವನನು ಕಂಡು
ಎನ್ನ ಮನವವಧಾನಗೊಂಡಿರುವುದು. ೧೬

ಸುಮಂತ್ರ—ಮನುಷ್ಯರ ಸ್ವಭಾವವೇ ಹೀಗೆ—ಒಬ್ಬೊಬ್ಬರಿಗೆ ಒಬ್ಬೊಬ್ಬರನ್ನು ಕಂಡಾಗ ಪ್ರೀತಿರಸವುಕ್ಕುತ್ತದೆ. ಇದನ್ನೇ ಲೋಕರೂಢಿಯಲ್ಲಿ ಜನರು 'ತಾರಾಮೈತ್ರಿ' 'ಚಕ್ಷೂರಾಗ' ಎನ್ನುತ್ತಾರೆ. ಹಿಂದಿನ ಋಷಿಗಳು ಇದನ್ನೇ 'ಪ್ರೇಮ'ವೆಂದೂ, ಅದು ಅವರ್ಣನೀಯ ಮತ್ತು ಕಾರಣಾತೀತವೆಂದೂ ನುಡಿದಿದ್ದಾರೆ:—

ಆವ ನೇಹ ನಿರ್ನಿಮಿತ್ತ-
ವದಕೆ ಇಲ್ಲ ತಡೆಗಳು:
ಪ್ರೇಮಸೂತ್ರವದುವೆ ಜನರ-
ನೊಳಗಿನಿಂದ ಹೊಲಿವುದು. ೧೭

ಕುಮಾರರಿಬ್ಬರೂ (ಪರಸ್ಪರವಾಗಿ)—

ರಾಜಮಕುಟದಂತೆ ಚೆಲ್ವನಾಂತ ಇವನ ಮೈಯೊಳು
ಇಸುವೆನೆಂತು ಶರವನು?
ಪತ್ರಿಸಾರಲೊಡನೆ ಬಳೆಯಲಪ್ಪುವಾಸೆ ನನಗಿದೋ
ಒಗೆದುದೊಡಲ ಪುಲಕವು. ೧೮

ಆದೊಡಿಂತು ತವೆ ಕಠೋರ ತೇಜವನ್ನು ಮೆರೆದಿಹ
ಈತನಲ್ಲಿ ಶಸ್ತ್ರವಲ್ಲದನ್ಯವಿರ್ಪುದೇ ಗತಿ?
ಆವ ಶಸ್ತ್ರಕಿಂಥ ವೀರ ಗುರಿಯು ಎನಿಸದಿರ್ಪನೋ,
ಅಂಥ ಶಸ್ತ್ರವನ್ನು ಬರಿದೆ ಪಿಡಿಯಲೇನು ಬಂದುದು?

ಎತ್ತಿಪಿಡಿದ ಕೈದುವಿರೆಯು ಯುದ್ಧವಿಮುಖನಾದೊಡೆ,
ಎನ್ನ ಕುರಿತು ವೀರನೀತನೇನನಿಂದು ನುಡಿವನು?
ವೀರರೊಲ್ದ ನಿಷ್ಠೆಯಿಂತು ಕ್ರೂರಭಾವಸಂಗತ,
ಪಸರಿಸಲ್ಕೆ ಬಿಡದು ತಾನು ನೇಹಗಳನು ಖಂಡಿತ. ೧೯

ಸುಮಂತ್ರ (ಲವನನ್ನು ನೋಡಿ ಕಣ್ಣೀರು ಬಿಡುತ್ತ, ಸ್ವಗತ)—ಹೃದಯವೆ, ಏನೇನೋ ಏಕೆ ಯೋಚಿಸಿ ತಳಮಳಿಸುವೆ?—

ಮನದಭಿಲಾಷೆಗೆ ಯಾವುದು ಬೀಜವೊ
ವಿಧಿಯದನೇ ಮೊದಲಳಿಸಿಹುದು ;
ಮೊದಲೊಳೆ ಲತೆಯನು ಕಡಿದೊಗೆದಾಗಿರೆ,
ಹೂವುಗಳೆಲ್ಲಿಂದರಳುವುವು ? ೨೦

ಚಂದ್ರಕೇತು—ಆರ್ಯ, ಸುಮಂತ್ರ, ನಾನು ರಥದಿಂದ ಕೆಳಗಿಳಿಯುತ್ತೇನೆ.

ಸುಮಂತ್ರ—ಏತಕ್ಕೆ ?

ಚಂದ್ರಕೇತು—ಮೊದಲನೆಯದಾಗಿ, ಈ ವೀರಪುರುಷನನ್ನು ಪೂಜಿಸಿದಂತಾಗುತ್ತದೆ; ಎರಡನೆಯದಾಗಿ ಕ್ಷಾತ್ರಧರ್ಮವನ್ನು ಪಾಲಿಸಿದಂತೆಯೂ ಆಗುತ್ತದೆ, ರಥಿಗಳು ಪಾದಚಾರಿಗಳೊಡನೆ ಯುದ್ಧಗೈಯಲಾಗದೆಂದು ಶಾಸ್ತ್ರಜ್ಞರು ನುಡಿದಿದ್ದಾರೆ.

ಸುಮಂತ್ರ (ಸ್ವಗತ)—ಒಳ್ಳೆಯ ಕಷ್ಟದಲ್ಲಿ ಸಿಕ್ಕಿಕೊಂಡೆನಲ್ಲಾ—

ಯುಕ್ತಾಚಾರ ನಿಷೇಧವನೆಂತು
ಮಾಳ್ಪನು ತಿಳಿದವನೆನ್ನಂತೆ ?
ಸಮ್ಮತಿಯನು ತಾನೀವುದದೆಂತು
ಪ್ರಾಣಾಪಾಯದ ಕಾರ್ಯಕ್ಕೆ ? ೨೧

ಚಂದ್ರಕೇತು—ನಮ್ಮ ಪೂಜ್ಯತಂದೆಗಳಿಗೆ ಕರ್ತವ್ಯಸಂದೇಹ ಬಂದಾಗಲೆಲ್ಲ, ಅಜ್ಜನ ಪ್ರಿಯಸಖನೆಂದು ನಿನ್ನನ್ನೇ ಕೇಳುವುದನ್ನು ನೋಡಿದ್ದೇನೆ. ಈಗೇಕೆ ಆರ್ಯನು ಸುಮ್ಮನೆ ಯೋಚಿಸುತ್ತಿರುವುದು ?

ಸುಮಂತ್ರ—ಆಯುಷ್ಮಂತನೆ, ನಿನ್ನ ಇಷ್ಟವು ಧರ್ಮಕ್ಕೆ ಅನುಗುಣವಾಗಿದೆ—

ಸಂಗ್ರಾಮೋಚಿತ ನೀತಿಯಿದೇ ದಿಟ
ಧರ್ಮ ಸನಾತನವಿದೆಯಹುದು ;
ಇದೆ ರಘುಸಿಂಹರ ವೀರಚರಿತ್ರೆಯ
ಪೂರ್ವದ ಪದ್ಧತಿಯಹುದಹುದು. ೨೨

ಚಂದ್ರಕೇತು—ಆರ್ಯನ ಮಾತು ನಿರುಪಮವಾದುದು.

ಇತಿಹಾಸ ಪುರಾಣಂಗಳನಂತೆಯೆ
ಧರ್ಮಪ್ರವಚನವೆಲ್ಲವನು ;

ಅಂತೆಯೆ ರಘುಗಳ ಕುಲನೀತಿಯನು
ಬಲ್ಲವರಲ್ಲವೆ ನೀವುಗಳು. ೨೩

ಸುಮಂತ್ರ (ಸ್ನೇಹಬಾಷ್ಪಗಳಿಂದ ಆಲಿಂಗಿಸಿ)—

ನಿನ್ನಯ್ಯನಿಂದ್ರಜಿತುಸೂದನನೆ ಶಿಶುವೆನಲು
ಪುಟ್ಟಿ ಗಡ ಕಳೆದಿರುವ ದಿನವೆನಿತು, ಮಗುವೆ?
ಆತನಣ್ಣಗನೆ ವೀರಧರ್ಮವನು ಕಾಯುತಿರೆ
ಸುಪ್ರತಿಷ್ಠಿತವಾಯ್ತು ದಶರಥನ ಕುಲವು. ೨೪

ಚಂದ್ರಕೇತು (ದುಃಖದಿಂದ)—

ಜ್ಯೇಷ್ಠನೇ ರಘುಗಳಿಗೆ ಅಪ್ರತಿಷ್ಠಿತನೆನಲು
ಸುಪ್ರತಿಷ್ಠೆಯದೆಂತು ನಮ್ಮ ಕುಲಕೆ?
ಈ ದುಗುಡದಿಂದೆಲ್ಲ ಪರಿತಾಪಗೊಂಡಿಹರು
ಮೂವರೂ ಮಿಕ್ಕ ತಂದೆಗಳು ನಿಜದೆ. ೨೫

ಸುಮಂತ್ರ—ಅಹಹ, ಚಂದ್ರಕೇತುವಿನ ಮಾತುಗಳು ಹೃದಯ ಮರ್ಮಗಳನ್ನೇ ಇರಿಯುತ್ತಿವೆ.

ಲವ—ರಸಗಳ ಕ್ರಮವು ಸಂಮಿಶ್ರವಾಗಿದೆ.

ಇಂದುವುದಿಸಲು ಮುದವನಾನುವ ಮಧುರ ಕುಮುದಿನಿಯಂತೆಯೆ
ಇವನ ಕಾಣಲ್ಕೆನ್ನ ನೇತ್ರವು ಇಹುದು, ಆದೊಡೆ ರಣವನು
ಬಯಸಿ ಘೋರೆನೆ ನೀಳ್ದ ಟಂಕೃತಿಯೆಸೆವ ಗುರುತರ ಬಿಲ್ಲೊಳು
ನೇಹದೋರುತೆ ಬಾಹುವೆನ್ನಯ ಮೆರೆವುದುಲ್ಬಣರಸವನು. ೨೬

ಚಂದ್ರಕೇತು (ರಥದಿಂದಿಳಿದು)—ಆರ್ಯ, ಸವಿತೃಕುಲದ ಚಂದ್ರಕೇತು ನಮಸ್ಕರಿಸುತ್ತಾನೆ.

ಸುಮಂತ್ರ—ನಿನ್ನ ವೈರಿಗೆ ಮಾತ್ರ ಸೋಲಾಗುವಂತೆ ಭಗವಾನ್ ಆದಿವರಾಹನು ಅನುಗ್ರಹಿಸಲಿ. ಅಲ್ಲದೆ–

ಕುಲಕೆ ಪಿತನೆನೆ ಸವಿತೃದೇವನು ನಿನ್ನ ಕಾಯಲಿ ರಣದೊಳು
ನಿನ್ನ ಗುರುಗಳ ಗುರು ವಸಿಷ್ಠನು ನಿನಗೆ ಗೈಯಲಿ ಶುಭವನು;
ಇಂದ್ರ ವಿಷ್ಣು ಕೃಶಾನು ಮಾರುತ ಗರುಡರೋಜವು ಸಾರಲಿ,
ರಾಮ ಲಕ್ಷ್ಮಣ ಚಾಪಟಂಕೃತಿ ಮಂತ್ರವೀಯಲಿ ಜಯವನು. ೨೭

ಲವ—ಕುಮಾರ, ನೀನು ರಥದಲ್ಲಿದ್ದರೇ ಚೆನ್ನಾಗಿ ಕಾಣುವೆ. ಅತ್ಯಾದರವೇನೂ ಬೇಡ.

ಚಂದ್ರಕೇತು—ಹಾಗಾದರೆ ಮಹಾಶಯನೂ ಇನ್ನೊಂದು ರಥವನ್ನು ಅಲಂಕರಿಸಬೇಕು.

ಲವ—ಆರ್ಯ, ರಾಜಪುತ್ರನನ್ನು ಮತ್ತೆ ರಥದಲ್ಲಿ ಕುಳ್ಳಿರಿಸು.

ಸುಮಂತ್ರ—ನೀನೂ ಕೂಡ ಚಂದ್ರಕೇತುವಿನ ಮಾತನ್ನು ನಡೆಸು.

ಲವ—ವಾಹನಗಳನ್ನು ಕುರಿತು ವಿಮರ್ಶೆ ಮಾಡಬೇಕೆ? ಆದರೆ ನಾವು ಅರಣ್ಯವಾಸಿಗಳು; ರಥಗಳಲ್ಲಿ ಕುಳಿತು ರೂಢಿಯಿಲ್ಲ.

ಸುಮಂತ್ರ—ಮಗು, ದರ್ಪಸೌಜನ್ಯಗಳಿಗನುಗುಣವಾಗಿ ಯಾವುದು ಉಚಿತವೋ ಅದನ್ನು ಮಾಡುವುದು ನಿನಗೇ ಸೇರಿದೆ. ಇಂತಹ ನಿನ್ನನ್ನು ಇಕ್ಷ್ವಾಕು ವಂಶದ ರಾಜನಾದ ರಾಮಭದ್ರನು ಕಂಡಿದ್ದರೆ ಪ್ರೀತಿಯಿಂದ ಅವನ ಹೃದಯವೇ ಕರಗಿ ನೀರಾಗುತ್ತಿತ್ತು.

ಲವ—ಆರ್ಯ, ಆ ರಾಜರ್ಷಿ ಒಳ್ಳೆಯವನೆಂದು ನಾವೂ ಕೇಳಿದ್ದೇವೆ. (ನಾಚಿಕೆಯಿಂದ)—

ನಾವು ಎಂದೂ ಇಂತುಟಲ್ಲವು ಯಜ್ಞಘಾತವ ಗೈಯೆವು,
ಗುಣಗಳೆಸೆಯುವ ಆ ನೃಪಾಲನೊಳಾರ್ಗೆ ಗೌರವವಿಲ್ಲವು;
ಆದೊಡಶ್ವವ ಕಾವ ಜನಗಳ ಮಾತು ಮುಳಿಸನು ತಂದಿತು
ಕ್ಷತ್ರಕುಲದೊಳಗೆಲ್ಲರಂ ನೀಳ್ಕರಿಸಿ ಚಂಡವೆನಲ್ಕದು. ೨೮

ಚಂದ್ರಕೇತು (ನಸುನಕ್ಕು)—ಓಹೋ, ತಮಗೆ ತಂದೆಯವರ ಪ್ರತಾಪಾತಿಶಯವನ್ನು ಕೇಳಿದರೂ ಕೋಪವೋ?

ಲವ—ಕೋಪವಿರಲಿ, ಬಿಡಲಿ. ಇಷ್ಟನ್ನು ಮಾತ್ರ ಕೇಳುತ್ತೇನೆ. ರಾಜನಾದ ರಾಘವನು ವಿನಯಸಂಪನ್ನನೆಂದು ಕೇಳಿದ್ದೇವೆ. ತಾನೂ ಗರ್ವಪಡುವುದಿಲ್ಲ; ಆತನ ಪ್ರಜೆಗಳೂ ಗರ್ವಿತರಲ್ಲವೆನ್ನುತ್ತಾರೆ. ಎಂದಮೇಲೆ ಅವನ ಆಳುಗಳೇಕೆ ರಾಕ್ಷಸೀವಾಣಿಯನ್ನು ಉದ್ಗರಿಸುತ್ತಾರೆ?

ಮತ್ತ ದೃಪ್ತರ ವಾಣಿಯನು ಋಷಿಗಳೆನ್ನುವರು
ಭಾವಿಪೊಡೆ ರಾಕ್ಷಸೀವಾಣಿಯೆಂದು;
ಅದೆ ಎಲ್ಲ ವೈರಗಳಿಗುದ್ಭವಿಪ ನೆಲನಹುದು
ಅದೆ ನಾಡೆ ಬುವಿಗೆಲ್ಲ ನರಕವಹುದು. ೨೯

ಎಂಬುದಾಗಿ ಅದನ್ನು ಹಿರಿಯರು ಹೀಗಳೆದಿದ್ದಾರೆ. ಹಾಗೆಯೇ ಒಳ್ಳೆಯ ಮಾತನ್ನು ಹೊಗಳಿಯೂ ಇದ್ದಾರೆ—

ಕಾಮಗಳ ಕರೆಯುವುದು, ಓಡಿಸುವುದಶುಭವನು,
ಜಸವೀವುದಟ್ಟುವುದು ದುಷ್ಕೃತಗಳ;
ಇಂತಪ್ಪ ಮಂಗಳದ ಜನನಿಯನು ವಾಣಿಯನು
ಧೀರರೊರೆವರು ಕಾಮಧೇನುವೆಂದು. ೩೦

ಸುಮಂತ್ರ—ಅಹಾ, ಈ ವಾಲ್ಮೀಕಿಶಿಷ್ಯನ ಸ್ವಭಾವ ಪರಿಶುದ್ಧವಾದುದು. ಋಷಿಸಂಸ್ಕಾರದಿಂದ ಕೂಡಿದ ಸುವಚನಗಳನ್ನೇ ಇವನಾಡುತ್ತಾನೆ.

ಲವ—ಚಂದ್ರಕೇತು, 'ತಂದೆಯವರ ಪ್ರತಾಪಾತಿಶಯವನ್ನು ಕೇಳಿದರೂ ಕೋಪವೋ' ಎಂದೆಯಲ್ಲಾ; ಅದಕ್ಕಾಗಿ ಕೇಳುತ್ತೇನೆ—ಕ್ಷತ್ರಧರ್ಮ ಕೆಲವರಲ್ಲಿ ಮಾತ್ರ ಇರುವ ಸ್ವತ್ತೋ?

ಸುಮಂತ್ರ—ನೀನು ಇಕ್ಷ್ವಾಕ ನೃಪತಿಯನ್ನು ಅರಿಯೆ, ಅದಕ್ಕಾಗಿ ಹೀಗೆ ಹೇಳುತ್ತಿರುವೆ. ಈ ಅತಿಪ್ರಸಂಗವನ್ನು ಬಿಟ್ಟುಬಿಡು—

ಸೈನ್ಯವ ಚೂರ್ಣಂಗೈಯುತೆ ಮೆರೆದೈ
ನಿನ್ನಯ ಶೌರ್ಯದ ಬಲ್ಮೆಯನು;
ಆದೊಡೆ ಭಾರ್ಗವದಮನನ ವಿಷಯದೆ
ನೀಂ ನಿರ್ಬಂಧಿಸೆ ತರವಲ್ತು. ೩೧

ಲವ (ನಗುತ್ತ)—ಆರ್ಯ, ಜಮದಗ್ನಿಯ ಮಗನನ್ನು ಆ ರಾಜನು ಸೋಲಿಸಿದ ಮಾತ್ರಕ್ಕೆ ಇಷ್ಟೊಂದು ಅಬ್ಬರವೇಕೆ?

ವಾಣಿಯೊಳಿರ್ಪುದು ವಿಪ್ರರ ವೀರ್ಯವು
ಕ್ಷತ್ರಿಯರದಟದು ಭುಜಗಳೊಳು;
ಭಾರ್ಗವ ವಿಪ್ರನು ಶಸ್ತ್ರವನಾಂತಿರೆ
ಆವನಂ ಜಯಿಸಲು ದೊರೆಗೇಂ ಜಸವು? ೩೨

ಚಂದ್ರಕೇತು (ಖತಿಗೊಂಡು)—ಆರ್ಯ, ಸುಮಂತ್ರ, ವಾಗ್ವಾದ ಸಾಕು.

ಇವನೊಬ್ಬ ಹೊಚ್ಚಹೊಸ ಪುರುಷಾವತಾರ
ಭಾರ್ಗವನೆ ಈತನಿಗೆ ಅಲ್ಲ ವೀರ;

ಸಪ್ತಭುವನಂಗಳಿಗೆ ಅಭಯದಕ್ಷಿಣೆಯ
ತೆತ್ತ ತಂದೆಯ ಪುಣ್ಯಚರಿತೆಯರಿಯ. ೩೩

ಲವ—ರಘುಪತಿಯ ಚರಿತೆಯೂ ಮಹಿಮೆಯೂ ಯಾರಿಗೆ ತಾನೆ ಗೊತ್ತಿಲ್ಲ? ಅದನ್ನು ಬಾಯಿಬಿಟ್ಟು ಆಡಿ ತೋರಿಸಬೇಕೋ? ಹೋಗಲಿ ನಮಗೇಕೆ—

ವೃದ್ಧರವರ್ಗಳ ಕೃತಿ ವಿಚಾರಣೆಗರ್ಹವಲ್ಲವು, ಪೋಗಲಿ,
ಕೊಂದು ಸುಂದಸ್ತ್ರೀಯನಾಂತರು ಜಸವ, ಭೂವಿಖ್ಯಾತರು;
ಖರನ ಬವರದೊಳಿಟ್ಟ ಮೂರೂ ಅಡಿಗಳಾಗವು ಹಿಮ್ಮೊಗ,
ಇಂದ್ರಸೂನುವ ಕೊಲ್ಲುವೆಡೆಯೊಳು ಕುಶಲರೆಲ್ಲರು ಬಲ್ಲರು. ೩೪

ಚಂದ್ರಕೇತು—ಆ, ತಂದೆಯನ್ನು ನಿಂದಿಸಿ ಹದ್ದು ಮೀರಿದೆ. ಅತಿಯಾಗಿ ಹರಟುತ್ತಿರುವೆ.

ಲವ—ಓ, ನನ್ನ ಮೇಲೆಯೇ ಹುಬ್ಬುಗಂಟಿಡುತ್ತಾನೆ.

ಸುಮಂತ್ರ—ಇಬ್ಬರ ಸಿಟ್ಟೂ ಏರಿದೆ, ಈಗ—

ಕೋಪದಿಂದೊಗೆತಂದ ನಡುಕವು ತಲೆಯ ಗಂಟನು ಕೆದರಿರೆ,
ಕೆಂಪುತಾವರೆಯೆನಿಪ ಕಣ್ಗಳು ಮತ್ತೆ ಕೆಂಪನು ತಳೆದಿವೆ;
ಹುಬ್ಬುಗಂಟುಗಳಿಂತು ಕುಣಿಯಲು ಮೊಗವು ತಳೆದಿದೆ ಕಾಂತಿಯ
ಕಪ್ಪು ಮೇಲ್ವಾಯ್ದಿಂದುವಿನ ಮೇಣ್ ದುಂಬಿ ಮುತ್ತಿದ ಪದುಮದ. ೩೫

ಕುಮಾರರಿಬ್ಬರೂ—ಇಲ್ಲಿಂದ ಯುದ್ಧಯೋಗ್ಯವಾದ ಭೂಮಿಗೆ ಹೋಗೋಣ.

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ 'ಕುಮಾರ ವಿಕ್ರಮ' ಎಂಬ ಐದನೆಯ ಅಂಕ ಮುಗಿದುದು.

---

# ಆರನೆಯ ಅಂಕ

(ಉಜ್ಜ್ವಲ ವೇಷ ಧರಿಸಿದ ವಿದ್ಯಾಧರ ದಂಪತಿಗಳು ವಿಮಾನದಲ್ಲಿ ಬರುವರು)

ವಿದ್ಯಾಧರ—ಈ ಸೂರ್ಯಕುಲದ ಕುಮಾರರ ಅತ್ಯದ್ಭುತ ಪರಾಕ್ರಮಾಟೋಪ ದೇವದಾನವರನ್ನೂ ನಿಬ್ಬೆರಗಾಗಿಸಿದೆ. ಇಬ್ಬರೂ ಅಕಾಂಡಕಲಹ ಪ್ರಚಂಡರು. ಇಬ್ಬರೂ ಕ್ಷಾತ್ರಲಕ್ಷ್ಮಿಯನ್ನು ಮೆರೆಯುತ್ತಿದ್ದಾರೆ. ನೋಡು, ಪ್ರಿಯೆ, ನೋಡು—

ಬಿಲ್ಲ ಕಿಂಕಿಣಿ ಝಣಝಣೆನ್ನಲು ತೆಗೆದು ಜೇವೊಡೆಯುತ್ತಿರೆ
ಹೆದೆಯ ದನಿ ಬಿಲ್ಗೊಪ್ಪಿನಾರ್ಭಟವೆಸಗೆ ಕೋಲಾಹಲವನು;
ಶೂರರಿರ್ವರು ಭರದೆ ಸುರಿಸಲು ಬಾಣವರ್ಷವನವಿರತ
ಭುವನಭೀಕರವಾದ ಯುದ್ಧವು ನೆರೆದುದಚ್ಚರಿಯೆನಿಸುತ. ೧

ದಿವ್ಯದುಂದುಭಿ ಮೊಳಗುತಿರುವುದು
ಮಂಗಳಕ್ಕೆನಲಿರ್ವರ;
ಗುಡುಗುಡೆನ್ನುವ ಮೇಘದಂದದೆ
ಬಿಡದೆ ದುಂ ದುಂ ದುಮ್ಮೆನೆ. ೨

ಆದ್ದರಿಂದ ಈ ವೀರರಿಬ್ಬರ ಮೇಲೂ ಅವಿರತವಾಗಿ ಹೂಮಳೆಯನ್ನು ಕರೆಯೋಣ. ಅವೋ ಸೊಗಸಾಗಿ ಅರಳಿರುವ ಹೊಂದಾವರೆಗಳು; ಜತೆಗೆ ಕಲ್ಪತರುವಿನ ಮಣಿಮುಕುಲಗಳ ಮಕರಂದವೂ ಸೇರಿರುವುದರಿಂದ ಮತ್ತೂ ಸುಂದರವಾಗಿವೆ.

ವಿದ್ಯಾಧರಿ—ಇದೇನಿದು, ಅಕಸ್ಮಾತ್ತಾಗಿ ಹೊಳೆಯುವ ಕೋಲ್ಮಿಂಚಿನ ಕುಡಿಯಿಂದಲೋ ಎಂಬಂತೆ ಗಗನವೆಲ್ಲವೂ ಹೊಂಬಣ್ಣವಾಗಿಬಿಟ್ಟಿದೆ!

ವಿದ್ಯಾಧರ—ಇಂದೇನಾದರೂ—

ತ್ವಷ್ಟೃಯಂತ್ರವು ತಿರುಗೆ ಪರಿಯುವ
ಸೂರ್ಯನುಜ್ಜ್ವಲ ದೀಪ್ತಿಯೋ?
ನೀಲಕಂಠನ ಫಾಲನೇತ್ರದ
ರೆಪ್ಪೆಯಥವಾ ತೆರೆಯಿತೋ? ೩

ಓ, ತಿಳಿಯಿತು. ರೋಷಗೊಂಡ ಚಂದ್ರಕೇತು ಅದ್ವಿತೀಯವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ್ದಾನೆ. ಬೆಂಕಿಯ ಉರಿಗಳು ಅದರಿಂದಲೇ ಹೊರಟು ಹಬ್ಬುತ್ತಿವೆ. ಈಗ—

ಸುಟ್ಟು ಕರಿಕಾಗಿರಲು ಕೇತುಚಾಮರವೆಲ್ಲ
ಓಡಿವೆ ವಿಮಾನಗಳು ಬೇಗದಿಂದ;
ಧ್ವಜಪಟದ ಮೇಣುಟ್ಟ ವಸ್ತ್ರದೊಳು ಕುಂಕುಮದ
ಲೇಪದಾ ಸೊಬಗನ್ನು ಉರಿಯಿತ್ತುದು. ೪

ಆಶ್ಚರ್ಯವೇ ಸರಿ. ಓ ಅಗ್ನಿದೇವನು ಬೆಳೆಯುತ್ತಲೇ ಇರುವನಲ್ಲಾ! ಪ್ರಚಂಡವಾದ ವಜ್ರಖಂಡವೇ ಸಿಡಿದಂತೆ ಮೊಳಗುವ ಶಬ್ದವೇನು! ಮುಗಿಲುದ್ದ ಎದ್ದ ಕಿಡಿಗಳ ಗಡಣವೇನು! ಎತ್ತೆತ್ತಲೂ ಚಾಚಿ ನೆಕ್ಕುವ ಉರಿನಾಲಗೆಗಳ ಭೈರವಾಕಾರವೇನು! ಸುತ್ತಲೂ ಬೇಗೆಯು ಸಹಿಸುವಂತೆಯೇ ಇಲ್ಲ. ಆದ್ದರಿಂದ ಪ್ರಿಯತಮೆಯನ್ನು ನನ್ನ ಮೈಯಿಂದ ಮುಚ್ಚಿಕೊಂಡು ದೂರಕ್ಕಾದರೂ ಹೋಗಿಬಿಡುತ್ತೇನೆ. (ಹಾಗೆಯೇ ಮಾಡುವನು)

ವಿದ್ಯಾಧರಿ—ಅಹಾ, ಆನಂದ, ವಿಮಲ ಮುಕ್ತಾಫಲದಂತೆ ಶೀತಲವೂ ಸ್ನಿಗ್ಧವೂ ಮಾಂಸಲವೂ ಆದ ನಾಥನ ಅಂಗಸ್ಪರ್ಶದಿಂದ ಸಂತೋಷವುಕ್ಕಿ ಕಣ್ಣು ಮತ್ತೇರಿ ಮುಚ್ಚಿಕೊಳ್ಳುತ್ತಿದೆ; ಬೇಗೆ ಅರ್ಧ ಬರುವುದರೊಳಗೇ ಮಾಯವಾಯಿತು.

ವಿದ್ಯಾಧರ—ಪ್ರಿಯೆ, ನಾನೇನು ಮಾಡಿದ್ದೇನೆ? ಅಥವಾ—

ಪ್ರಿಯಜನವೇನಂ ಗೈಯದೆ ಇರ್ದೊಡೆ-
ಮೋಡಿಸುವನು ಸಂಕಷ್ಟಗಳ;
ಸೌಖ್ಯವನೀವನು, ಪ್ರಿಯಜನರಿರ್ಕೆಯೆ
ಮನುಜಗಮೂಲ್ಯಮಹಾಧನವು. ೫

ವಿದ್ಯಾಧರಿ—ಇದೇನು! ಗಗನಾಂಗಣವೆಲ್ಲವೂ ಮತ್ತಮಯೂರಕಂಠಗಳಂತೆ ಕಪ್ಪಾಗಿರುವ ಮುಗಿಲುಗಳಿಂದ ತುಂಬಿಹೋಗುತ್ತಿದೆ; ಅವಿರಲವಾಗಿ ತಳತಳಿಸುತ್ತಿರುವ ಬಳ್ಳಿಮಿಂಚುಗಳಿಂದ ಅವುಗಳ ಸೊಬಗು ಇಮ್ಮಡಿಸಿದೆ.

ವಿದ್ಯಾಧರ—ಅಹಾ, ಲವಕುಮಾರನು ಪ್ರಯೋಗಿಸಿರುವ ವಾರುಣಾಸ್ತ್ರದ ಪ್ರಭಾವವೇ ಇದು. ಓ, ಸಂತತವಾಗಿ ಸುರಿಯುತ್ತಿರುವ ಸಾವಿರಾರು ವೃಷ್ಟಿಧಾರೆಗಳಿಂದ ಆಗ್ನೇಯಾಸ್ತ್ರ ಶಾಂತವೇ ಆಗಿಹೋಯಿತು.

ವಿದ್ಯಾಧರಿ—ನನಗೆ ಸಂತೋಷವಾಯಿತು, ತುಂಬಾ ಸಂತೋಷ.

ವಿದ್ಯಾಧರ—ಅಯ್ಯಯ್ಯೋ, ಯಾವುದೇ ಆಗಲಿ ಅತಿಯಾದರೆ ಕೇಡೇ. ಪ್ರಲಯ ಕಾಲದ ಚಂಡಮಾರುತಗಳ ಸಂಕ್ಷೋಭದಿಂದ ಗಂಭೀರವಾಗಿ ಗುಡುಗುಟ್ಟುವ ಮೋಡಗಳಿಂದಾಗಿ ಕವಿದಿರುವ ಕಾರ್ಗತ್ತಲೆಯಲ್ಲಿ ಮುಳುಗಿ ಬಿಟ್ಟಂತೆಯೂ, ಒಂದೇ ಬಾರಿಗೆ ವಿಶ್ವವನ್ನೇ ನುಂಗಿಬಿಡಲೆಳಸಿದ ವಿಕಟ ವಿಕರಾಲ ಮೃತ್ಯುವಿನ ಮುಖಕಂದರದಲ್ಲಿ ಹೊರಳಾಡುತ್ತಿರುವಂತೆಯೂ, ಯುಗಾಂತ್ಯದಲ್ಲಿ ಯೋಗನಿದ್ರಾವಶನಾಗುತ್ತ ಸಕಲದ್ವಾರಗಳನ್ನೂ ನಿರೋಧಿಸಿರುವ ನಾರಾಯಣನ ಉದರದಲ್ಲಿ ತುರುಕ್ಕಿಟಂತೆಯೂ, ಜೀವ ಜಾತವೇ ಗಡಗಡ ನಡುಗುತ್ತಿದೆ. ಭಲೆ, ಚಂದ್ರಕೇತು, ಭಲೆ! ಸಕಾಲದಲ್ಲಿ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿರುವೆ.

ಗಾಳಿಯು ಬಹಳೆನಿಪಂಬುದವೆಲ್ಲವ-
ನೆಲ್ಲಿಯೊ ವಿಲಯವನೈದಿಸಿದೆ;
ವಿದ್ಯೆ ವಿವರ್ತಗಳೆಲ್ಲವನೊಡನೆಯೆ
ಬ್ರಹ್ಮದೊಳಳಿಸುವ ತೆರದಿಂದೆ. ೬

ವಿದ್ಯಾಧರಿ—ನಾಥ, ಇವನಾರು? ಗಾಬರಿಯಿಂದ ಕೈಯೆತ್ತಿದ್ದಾನೆ; ಉತ್ತರೀಯದ ಸೆರಗು ಗಾಳಿಯಲ್ಲಿ ಅಲ್ಲಾಡುತ್ತಿದೆ. ಬಹಳ ದೂರದಿಂದಲೇ ಮಧುರವೂ ಪ್ರೀತಿಮಯವೂ ಆದ ನುಡಿಗಳಿಂದ ಯುದ್ಧವನ್ನು ತಡೆಯುತ್ತ ಈ ಕುಮಾರರ ನಡುವೆ ವಿಮಾನದಿಂದ ಇಳಿಯುತ್ತಿದ್ದಾನೆ.

ವಿದ್ಯಾಧರ (ನೋಡಿ)—ಈತನು ಶಂಬೂಕವಧೆಯನ್ನು ಮುಗಿಸಿಕೊಂಡು ಹಿಂದಿರುಗುತ್ತಿರುವ ರಘುಪತಿ.

ಮಹಾಪುರುಷವಾಣಿಯನ್ನು ಕೇಳಿದೊಡನೆ ಗೌರವ
ಲವನಿಗುಕ್ಕೆ ಆತನಲ್ಲಿ ನಿಲ್ಲಿಸುತ್ತೆ ಕದನವ;
ಶಾಂತನಾದನಂತೆ ಚಂದ್ರಕೇತು ನಮಿಸುತಿರುವನು,
ಸುತರಮಿಲನದಿಂದ ದೊರೆಗೆ ಶುಭವೆ ಬರುವುದಾಗಲಿ. ೭

ಇದು ಮಿಶ್ರ–ವಿಷ್ಕಂಭಕ

---

(ಪ್ರವೇಶ—ರಾಮ, ಲವ, ಮತ್ತು ಪ್ರಣತನಾದ ಚಂದ್ರಕೇತು)

ರಾಮ (ಪುಷ್ಪಕದಿಂದ ಇಳಿದು)—

ದಿನಪಕುಲಕೆ ಚಂದ್ರನೆನಿಪ ಚಂದ್ರಕೇತುವೆ,
ಓಡಿಬಂದು ತಬ್ಬು ಎನ್ನನೀಗ ವತ್ಸನೆ;
ಮಂಜಿನಂತೆ ತಣ್ಪನೀವ ನಿನ್ನ ದೇಹವು
ಎನ್ನ ಚಿತ್ತದಾಹವನ್ನು ಶಮನಗೊಳಿಸಲಿ. ೮

(ಎದ್ದು ಸ್ನೇಹ, ವಾತ್ಸಲ್ಯಗಳಿಂದ ಬಿಗಿದಪ್ಪಿ)—ದಿವ್ಯಾಸ್ತ್ರಧರನಾದ ನಿನಗೆ ಕುಶಲವಷ್ಟೆ ?

ಚಂದ್ರಕೇತು—ಹೌದು ಕುಶಲವೇ, ಅತ್ಯದ್ಭುತಕ್ರಿಯನೂ ಪ್ರಿಯದರ್ಶನನೂ ಆದ ಲವನ ದರ್ಶನಲಾಭದಿಂದ. ಆದ್ದರಿಂದ ಬಿನ್ನವಿಸಿಕೊಳ್ಳುತ್ತೇನೆ—ತಂದೆ ಈ ಮಹಾ ವೀರಾಗ್ರಣಿಯನ್ನು ನನ್ನನ್ನು ಹೇಗೋ ಹಾಗೆ ಅಥವಾ ನನಗಿಂತಲೂ ಹೆಚ್ಚಿನ ಪ್ರೇಮದೃಷ್ಟಿಯಿಂದ ನೋಡಬೇಕು.

ರಾಮ (ಲವನನ್ನು ನೋಡಿ)—ಕುಮಾರನ ಗೆಳೆಯನು ಆಕೃತಿಯಲ್ಲಿ ಅತಿ ಗಂಭೀರನೂ, ಮಧುರನೂ, ಮಂಗಳಕರನೂ ಆಗಿರುವುದು ಆನಂದಕರವಾಗಿದೆ—

ಅಸ್ತ್ರವೇದವೆ ಮೂರ್ತಿಗೊಂಡುದೊ ಲೋಕರಕ್ಷಣೆಗೆಂಬವೋಲ್
ಕ್ಷಾತ್ರಧರ್ಮವೆ ತನುವನಾಂತುದೊ ಬ್ರಹ್ಮಕೋಶದ ಕಾಪಿಡಲ್ ;
ಶಕ್ತಿಗಳ ಸಮುದಾಯವೋ ಮೇಣ್, ಸಂಚಯವೊ ತಾಂ ಗುಣಗಳ
ಜಗದ ಪುಣ್ಯದ ಕೃತಿಯ ರಾಶಿಯೆ ರೂಪುಗೊಂಡೇಂ ನಿಂದುದೋ ? ೯

ಲವ (ಸ್ವಾಗತ)—ಅಹಾ, ಈ ಮಹಾಪುರುಷನ ದರ್ಶನ ಪುಣ್ಯಕರವಾಗಿದೆ—

ವಿಶ್ವಾಸ ಸಂಪ್ರೀತಿ ಭಕ್ತಿಗಳಿಗೆಲ್ಲಕ್ಕೆ
ಈತನೊರ್ವನೆ ದೊಡ್ಡ ನೆಲೆವೀಡೆನೆ;
ಉತ್ಕೃಷ್ಟ ಧರ್ಮಪ್ರಸಾದವೇ ಈತನೊಳು
ಚೆಲ್ವಿಡಿದ ರೂಪಾಂತು ನಿಂದಿಹುದೆನೆ. ೧೦

ಏನಾಶ್ಚರ್ಯ ?

ವೈರವುಪಶಮಿಸಿಹುದು, ಪಸರಿಪುದು ಘನಹರ್ಷವು,
ಔದ್ಧತ್ಯವೋಡಿದುದು, ವಿನಯ ತಲೆದೋರಿಸಿಹುದು ;
ಈತನನು ಕಂಡೊಡನೆ ಪರವಶತೆಯೆನಗಾದುದು,
ತೀರ್ಥಗಳ ಮಹಿಮೆಯೊಲು ಮಹಿತರತಿಶಯವಧಿಕವು. ೧೧

ರಾಮ—ಇದೇನು ತಟ್ಟನೆ ಇವನು ನನ್ನ ದುಃಖಗಳನ್ನು ತಡೆಗಟ್ಟಿರುವುದಲ್ಲದೆ ಅಂತರಾತ್ಮದಲ್ಲಿ ಪ್ರೀತಿಯನ್ನೂ ಉಕ್ಕಿಸುತ್ತಿರುವನು ? ಅಥವಾ—ಪ್ರೀತಿಗೆ ನಿಮಿತ್ತವಿರಬೇಕೆಂಬುದೇ ಸ್ವಭಾವವಿರುದ್ಧ :—

ವಸ್ತುಗಳ ಬೆಸೆಯುವುದು ಒಳಗಿನಾವುದೊ ಹದನು
ಬಹಿರುಪಾಧಿಗಳಲ್ಲ ನೇಹಗಳ ಮೂಲ ;
ಅರಳುವುದು ತಳುವದೆಯೆ ರವಿಯುದಿಸೆ ತಾವರೆಯು
ಬೆಳಗೆ ಶಶಿ ಕರಗುವುದು ಚಂದ್ರಮಣಿಶೀಲ. ೧೨

ಲವ—ಚಂದ್ರಕೇತು, ಇವರಾರು ?

ಚಂದ್ರಕೇತು—ಪ್ರಿಯವಯಸ್ಯ, ಇವರೇ ತಂದೆಯವರು.

ಲವ—ನೀನು ನನ್ನನ್ನು 'ಪ್ರಿಯವಯಸ್ಯ' ಎಂದಿರುವುದರಿಂದ ಧರ್ಮದ ಪ್ರಕಾರ ನನಗೂ ಹಾಗೆಯೇ. ನೀವು 'ತಂದೆ'ಯೆಂದು ಕರೆಯುವುದು ರಾಮಾಯಣದ ಕಥಾಪುರುಷರಾದ ನಾಲ್ವರನ್ನಲ್ಲವೆ? ಆದ್ದರಿಂದ ವಿಶೇಷತಃ ಯಾರೆಂಬುದನ್ನು ಹೇಳು.

ಚಂದ್ರಕೇತು—ಜ್ಯೇಷ್ಠರಾದ ತಂದೆಯವರೇ ಎಂದು ತಿಳಿ.

ಲವ (ಉಲ್ಲಾಸದಿಂದ)—ಏನು, ಸಾಕ್ಷಾತ್ ರಘುನಾಥನೆ ? ದೇವನನ್ನು ನೋಡಿದ ನನಗೆ ಇಂದು ಸುಪ್ರಭಾತವೇ ನಿಜ. (ವಿನಯಕೌತುಕಗಳಿಂದ ನೋಡಿ) ತಂದೆ, ವಾಲ್ಮೀಕಿಯ ಶಿಷ್ಯನಾದ ಲವನು ನಮಸ್ಕರಿಸುತ್ತಾನೆ.

ರಾಮ—ಆಯುಷ್ಮಂತನೆ, ಏಳು, ಬಾಪ್ಪಾ. (ಪ್ರೀತಿಯಿಂದಾಲಿಂಗಿಸಿಕೊಂಡು) ವತ್ಸ, ಅತಿವಿನಯವನ್ನು ಬಿಡು. ಅನೇಕ ಬಾರಿ ನನ್ನನ್ನು ಬಿಗಿಯಾಗಿ ತಬ್ಬಿಕೊ—

ಪರಿಣತ ಪದ್ಮದ ಗರ್ಭದ ದಳದೊಲು
ಪೀನಂ ಮಸೃಣಂ ಸುಕುಮಾರಂ ;
ನಿನ್ನೀ ಅಂಗಸ್ಪರ್ಶಂ ಶಶಿಚಂ-
ದನಸೇಕದೊಲಾನಂದಕರಂ. ೧೩

ಲವ (ಸ್ವಗತ)—ನನ್ನಲ್ಲಿ ಇವರ ಅಕಾರಣಸ್ನೇಹವು ಇಷ್ಟರಮಟ್ಟಿಗಿದೆ ! ಇವರನ್ನೇ ಗಾಸಿಮಾಡಲು ಕೈದುಗೊಂಡ ನಾನೆಂತಹ ಅಜ್ಞ. (ಪ್ರಕಾಶ) ಲವನ ಬಾಲ ಬುದ್ಧಿಯನ್ನು ತಂದೆಯವರು ಕ್ಷಮಿಸಬೇಕು.

ರಾಮ—ವತ್ಸನು ಮಾಡಿದ ಅಪರಾಧವೇನು ?

ಚಂದ್ರಕೇತು—ಕುದುರೆಯ ಕಾಪಿನವರಿಂದ ತಂದೆಯವರ ಪ್ರತಾಪದ ಘೋಷಣೆ ಯನ್ನು ಕೇಳಿ ಇವನು ವೀರನಂತೆ ವರ್ತಿಸಿದನು.

ರಾಮ—ಕ್ಷತ್ರಿಯನಿಗೆ ಇದು ಭೂಷಣವೇ—

ಪರರ ಪಸರಿಪ ತೇಜವನು ತೇಜಸ್ವಿಯುಪ್ಪನು ಸಹಿಸನು,
ಅವನಿಗದು ಸ್ವಭಾವಸಿದ್ಧವು ಕೃತಕವೆಂದೂ ಆಗದು ;
ದೇವ ದಿನಪನು ಕಿರಣಜಾಲಗಳಿಂದೆ ಸಂತತ ಬೆಳಗಲು
ಅಗ್ನಿಶಿಲೆಯೇಕುರಿಯನುಗುಳ್ವುದು ಮಾನಭಂಗಿತನೆಂಬೊಲು. ೧೪

ಚಂದ್ರಕೇತು—ಕೋಪವೂ ಈ ಮಹಾವೀರನಿಗೆ ಕಳೆಯನ್ನೇ ಕಟ್ಟಿದೆ. ಪ್ರಿಯ ವಯಸ್ಯನು ಜೃಂಭಕಾಸ್ತ್ರದಿಂದ ಸುತ್ತಲಿನ ಸೈನ್ಯವನ್ನೆಲ್ಲಾ ನಿಷ್ಕಂಪಗೊಳಿಸಿ ಸ್ತಂಭೀಭೂತಮಾಡಿದ್ದಾನೆ. ತಂದೆಯವರು ನೋಡಬೇಕು.

ರಾಮ—ವತ್ಸ, ಲವ, ಅಸ್ತ್ರವನ್ನು ಉಪಸಂಹರಿಸಪ್ಪಾ. ಚಂದ್ರಕೇತು, ನೀನೂ ಕೂಡ ನಿಷ್ಕ್ರಿಯವಾಗಿ ಮರವಟ್ಟ ಪಡೆಗಳನ್ನು ಸಂತೈಸು.

ಲವ—ತಂದೆಯವರ ಅಪ್ಪಣೆ. (ಧ್ಯಾನ ಮಾಡುತ್ತಾನೆ)

ಚಂದ್ರಕೇತು—ಅಪ್ಪಣೆ. (ನಿಷ್ಕ್ರಮ)

ಲವ—ತಂದೆ, ಅಸ್ತ್ರ ಶಾಂತವಾಯಿತು.

ರಾಮ—ವತ್ಸ, ಅಸ್ತ್ರಗಳ ಪ್ರಯೋಗ ಹಾಗು ಉಪಸಂಹಾರಗಳು ಸಾಂಪ್ರದಾಯಿಕವಾಗಿ ಮಂತ್ರಸಿದ್ಧವಾದ ರಹಸ್ಯಗಳು—

ಈ ಮಂತ್ರರಹಸ್ಯವನ್ನು ಭಗವಾನ್ ಕೃಶಾಶ್ವನು ಸಾವಿರ ವರ್ಷಗಳಿಗಿಂತಲೂ ಹೆಚ್ಚು ಕಾಲ ಶಿಷ್ಯವೃತ್ತಿ ಮಾಡಿದ ಕೌಶಿಕನಿಗೆ ಉಪದೇಶಿಸಿದನು; ಆ ಪೂಜ್ಯ ಮಹರ್ಷಿ ನನಗೆ ಉಪದೇಶಮಾಡಿದನು. ಇದು ಹಿಂದಿನ ಗುರುಪರಂಪರೆ. ಕುಮಾರನಿಗೆ ಸಿದ್ಧವಾದ ಸಂಪ್ರದಾಯವಾವುದೆಂದು ಕೇಳುತ್ತಿದ್ದೇನೆ.

ಲವ—ನಮ್ಮಿಬ್ಬರಿಗೂ ಈ ಅಸ್ತ್ರಗಳು ಸ್ವತಃ ಪ್ರಕಾಶಗೊಂಡಿವೆ.

ರಾಮ (ಯೋಚಿಸಿ)—ಯಾವುದು ತಾನೆ ಅಸಂಭವ? ಪ್ರಕೃಷ್ಟ ಪುಣ್ಯದ ಪರಿಪಾಕದಿಂದ ಹೆಚ್ಚಿನ ಮಹಿಮೆಯಿದ್ದಿರಬಹುದು. ಇರಲಿ, ಇಬ್ಬರು ಯಾರು ?

ಲವ—ನಾವಿಬ್ಬರೂ ಸೋದರರು, ಅವಳಿಜವಳಿಗಳು.

ರಾಮ—ಹಾಗಾದರೆ ಎರಡನೆಯವನು ಯಾರು ?

(ತೆರೆಯಲ್ಲಿ)

ದಾಂಡಾಯನ,

ಚಿರಜೀವಿ ಲವನಿಂದು ರಾಜಸೈನ್ಯಗಳೊಡನೆ
ಕದನಮಾಡಿದನಂತೆ ಹೌದೆಂಬಿರೇನು ?
ಮೂಜಗದೊಳಧಿರಾಜ ಶಬ್ದವಿಂದಿಲ್ಲೆನಲಿ,
ಕ್ಷತ್ರಿಯರ ಶಸ್ತ್ರಶಿಖಿಯಿಂದು ವಿರಮಿಸಲಿ. ೧೫

ರಾಮ—ಇವನಾರು ಇಂದ್ರಮಣಿ ಮೇಚಕಶರೀರದವ,
ದನಿಯಿಂದಲೇ ಎನಗೆ ಪುಲಕವನು ತರುವ ;
ನವನೀಲ ನೀರಧರ ಧೀರಗರ್ಜಿತಕೊಡನೆ
ಬದ್ಧಕುಟ್ಮಲವಪ್ಪ ನೀಪತರುವಿನೊಲು. ೧೬

ಲವ—ಇವನೇ ನನ್ನ ಹಿರಿಯಣ್ಣ. ಹೆಸರು 'ಕುಶ' ಎಂದು. ಭರತಾಶ್ರಮದಿಂದ ಈಗ ಹಿಂದಿರುಗಿದ್ದಾನೆ.

ರಾಮ (ಕೌತುಕದಿಂದ)—ವತ್ಸ, ಆಯುಷ್ಮಂತನನ್ನು ಇಲ್ಲಿಯೇ ಕರೆ.

ಲವ—ಆಗಲಿ. (ನಡೆಯುವನು)

(ಪ್ರವೇಶ—ಕುಶ)

ಕುಶ (ಹರ್ಷಧೈರ್ಯಗಳಿಂದ ಬಿಲ್ಲನ್ನು ಟಂಕಾರಮಾಡುತ್ತ)—

ಆ ವೈವಸ್ವತಮನುವಿನ ಕಾಲದಿನಿಂದ್ರಂಗಭಯವನೊಲಿದಿತ್ತ,
ತಮ್ಮಾ ಕ್ಷತ್ರಪ್ರತಾಪಾಗ್ನಿಗಳಂ ದೃಪ್ತರ ದಹನಕೆ ದೀಪಿಸಿದ ;
ಸೂರ್ಯಾನ್ವಯದಾ ದೊರೆಗಳ ಸಂಗಡ ಸಮನಿಸೆ ಕದನವು ಜಿಲ್ಲೆನ್ನ
ಧನ್ಯವಿದಾದುದು ದೀಪ್ತಾಸ್ತ್ರಂಗಳ ಕಾಂತಿಯೆ ನೀರಾಜಿಸೆ ಹೆದೆಯ. ೧೭

(ವಿಕಟವಾಗಿ ಅಡಿಯಿಡುವನು)

ರಾಮ—ಈ ಕ್ಷತ್ರಿಯಕಿಶೋರನಲ್ಲಿ ಅಸಾಧಾರಣವಾದ ಪೌರುಷಾತಿರೇಕ ಕಾಣುತ್ತದೆ—

ನೋಟಂ ತೃಣೀಕೃತ ಜಗತ್ತ್ರಯ ಸತ್ತ್ವಸಾರಂ,
ಧೀರೋದ್ಧತಂ ಗಮನಮುರ್ವಿಯೆ ತಗ್ಗುವನ್ನಂ ;
ಈ ಬಾಲ್ಯದೊಳ್ ಗಿರಿಗುರುತ್ವಮನಾಂತು ಬರ್ಪಂ
ವೀರಂ ರಸಂ ನಡೆವುದೋ ಗಡ ದರ್ಪಮೋ ತಾಂ. ೧೮

ಲವ (ಸಮೀಪಿಸಿ)—ಆರ್ಯನಿಗೆ ಜಯವಾಗಲಿ.

ಕುಶ—ತಮ್ಮ, ಏನು ಸುದ್ದಿ—'ಯುದ್ಧ' 'ಯುದ್ಧ' ಎಂಬುದಾಗಿ ?

ಲವ—ಎಂಥದೂ ಇಲ್ಲ. ಅಣ್ಣನು ದರ್ಪವನ್ನು ಬಿಟ್ಟು ವಿನಯದಿಂದಿರುವುದೇ ಸರಿ.

ಕುಶ—ಏತಕ್ಕಾಗಿ ?

ಲವ—ಏಕೆಂದರೆ ದೇವನಾದ ರಘುಪತಿಯೇ ಇಲ್ಲಿದ್ದಾನೆ. ಅವನಿಗೆ ನಮ್ಮಿಬ್ಬರಲ್ಲೂ ಪ್ರೀತಿ. ನಿನ್ನನ್ನು ಸಂಧಿಸಲು ಆತುರನಾಗಿದ್ದಾನೆ.

ಕುಶ (ಯೋಚಿಸಿ)—ರಾಮಾಯಣದ ಕಥಾನಾಯಕನೂ, ಬ್ರಹ್ಮಕೋಶದ ರಕ್ಷಕನೂ ಆದಾತನೇ ಅಲ್ಲವೆ ಅವನು ?

ಲವ—ಹೌದು.

ಕುಶ—ಹಾಗಾದರೆ ಆ ಮಹಾತ್ಮನ ದರ್ಶನ ಪುಣ್ಯಫಲವೇ ಸರಿ. ಆದರೆ ನಾವು ಆತನನ್ನು ಯಾವ ರೀತಿ ಕಾಣಬೇಕೋ ಅರಿಯೆ.

ಲವ—ಗುರುಗಳನ್ನು ಯಾವ ರೀತಿ ಕಾಣುವೆವೋ ಹಾಗೆಯೇ ಕಾಣಬೇಕು.

ಕುಶ—ಅದು ಹೇಗೆ ?

ಲವ—ಅತ್ಯುದಾತ್ತನೂ, ಸುಜನನೂ, ಊರ್ಮಿಳೆಯ ಮಗನೂ ಆದ ಚಂದ್ರಕೇತು 'ಪ್ರಿಯವಯಸ್ಯ'ನೆಂದು ನನ್ನನ್ನು ಕರೆಯುತ್ತಾನೆ. ಆ ಸಂಬಂಧದಿಂದ ರಾಜರ್ಷಿ ನಮಗೂ ಧರ್ಮದ ಪ್ರಕಾರ ತಂದೆಯೇ.

ಕುಶ—ಹಾಗಿದ್ದರೆ ಕ್ಷತ್ರಿಯನಾದರೂ ಆತನಲ್ಲಿ ವಿನಯವನ್ನು ತೋರುವುದು ನಿಂದ್ಯವಲ್ಲ. (ಇಬ್ಬರೂ ನಡೆಯುವರು)

ಲವ—ಅಣ್ಣನು ಈ ಮಹಾಪುರುಷನನ್ನು ಸಂದರ್ಶಿಸಬೇಕು. ಅವನ ಆಕಾರ ಅನುಭಾವ ಗಾಂಭೀರ್ಯಗಳ ಮೇಲಿಂದಲೇ ಆತನ ಲೋಕೋತ್ತರವಾದ ಮಹಾಕಾರ್ಯಗಳನ್ನು ಊಹಿಸಬರುವಂತಿದೆ.

ಕುಶ (ನೋಡಿ)—

> ರೂಪವೆನಿತು ಸುಪ್ರಸನ್ನ
> ಗಾಡಿಯೆನಿತು ಪಾವನ ;
> ರಾಮಚರಿತೆಯೊರೆದ ಕವಿಯ
> ವಾಕ್ಪ್ರಸಾರ ಶೋಭನ. ೧೯

(ಸಮೀಪಿಸಿ)—ತಂದೆ, ವಾಲ್ಮೀಕಿಯ ಶಿಷ್ಯನಾದ ಕುಶನು ನಮಸ್ಕರಿಸುತ್ತಾನೆ.

ರಾಮ—ಬಾಪ್ಪಾ, ಆಯುಷ್ಮಂತನೆ, ಬಾ.

ಅಮೃತಪೂರ್ಣ ಮೇಘದಂತೆ
ಪೊಳೆವ ಮೈಯ ನಿನ್ನನು;
ಪ್ರೀತಿಯಿಂದ ತಬ್ಬಿಕೊಳುವ
ಆಸೆ ತೀವಿತೆನ್ನನು. ೨೦

(ಅಪ್ಪಿಕೊಂಡು ಸ್ವಗತ)—ಈ ಬಾಲಕನು ಯಾರ (ಅಥವಾ 'ಯಾವ') ಮಗನಿರಬಹುದು ?

ಅಂಗ ಅಂಗದಿಂದ ಕರಗಿ ಪ್ರೇಮದಿಂದ ಜನಿಸಿದ
ಎನ್ನ ದೇಹಸಾರವೋ,
ಕಣ್ಗೆ ರೂಪನಾಂತು ಹೊರಗೆ ನಿಂದ ಚೇತನಾತ್ಮಕ-
ವಪ್ಪ ಒಂದೆ ಧಾತುವೋ;
ಸಾಂದ್ರ ಮಹಾನಂದವೆದೆಯನದಿರಿಸಲ್ಕೆ ಕರಗಿದ
ದ್ರವದಿನೀತ ಜನಿತನೋ,
ಏನೊ ಕಾಣೆ, ತಬ್ಬಿಕೊಳಲು ಕಾಯವನ್ನು ಅಮೃತದ
ಸ್ರೋತ ನೆನೆಸುವಂತಿದೆ. ೨೧

ಲವ—ತಂದೆಯೇ, ಸೂರ್ಯನು ನೆತ್ತಿಯ ಮೇಲೆ ಉರಿಯುತ್ತಿದ್ದಾನೆ. ಆದ್ದರಿಂದ ಪೂಜ್ಯರು ಈ ಸಾಲವೃಕ್ಷದ ನೆರಳಿನಲ್ಲಿ ಒಂದು ಕ್ಷಣ ಆಸನವನ್ನು ಸ್ವೀಕರಿಸಬೇಕು.

ರಾಮ—ವತ್ಸನ ಅಭೀಷ್ಟದಂತೆಯೇ ಆಗಲಿ.

(ಎಲ್ಲರೂ ನಡೆದು ಯಥೋಚಿತವಾಗಿ ಕುಳ್ಳಿರುವರು)

ರಾಮ (ಸ್ವಗತ)—

ವಿನಯಯೋಗವಿರೆಯುಮಿಂತು
ಸ್ಥಿತಿಯು, ಗಮನ, ಆಸನ,
ಎಲ್ಲ ಭಾವ ಲವನ ಕುಶನ,
ರಾಜಪದವನೊರೆವುದು. ೨೨

ತನುವೊಳವಿರತಮಾಗಿ ಲಕ್ಷ್ಮಿಯ ಗಾಡಿಗಳು ಪೊಳೆಪೊಳೆವುವು,
ಒಂದು ಒಂದೇ ಅಂಗದಲ್ಲಿಯು ಪೊಸತು ಕಾಂತಿಯ ತೋರ್ಪುವು;
ರಮ್ಯನಿರ್ಮಲರಶ್ಮಿನಿಕರವು ರತ್ನಗುಣವನು ತೋರ್ಪವೋಲ್
ಅರಳಿದರವಿಂದವನು ಮೇಣ್ಮಕರಂದಬಿಂದುಗಳಂತೆಯೆ. ೨೩

ಇವರಿಬ್ಬರಲ್ಲೂ ರಘುಕುಲಕುಮಾರರ ಲಕ್ಷಣಗಳು ಬಹುತರವಾಗಿ ಕಾಣುತ್ತಿವೆ—

ತರುಣಪಾರಾವತದ ಕಂಠದ ತೆರದೆ ನೀಲವು ತನುವಿದು
ಹೋಲಿ ಗೂಳಿಯ ಹಿಳಿಲನೀ ಹೆಗಲಿರ್ಪುದೈಸಲೆ ಬಂಧುರ;
ಸ್ತಿಮಿತವಾಗಿದೆ ನೋಟ ಶಾಂತತೆಯಾಂತ ಸಿಂಹವ ಹೋಲುತೆ
ದನಿ ಮೃದಂಗದ ತೆರದೆ ಸುಂದರ ಮಂಗಲಕ್ಕೆನೆ ಬಾಜಿಪ. ೨೪

(ಸೂಕ್ಷ್ಮವಾಗಿ ನೋಡಿ)—ಅಹಾ, ಆಕೃತಿಯಲ್ಲಿ ನನ್ನ ಹೋಲಿಕೆಯಿರುವುದು ಮಾತ್ರವಲ್ಲ;

ಜಾನಕಿಯ ಪ್ರತಿಯೊಂದು ಚಿಹ್ನೆಯದು ಇರ್ವರಲಿ
ಸ್ಫುಟವಾಗಿ ಕಾಣುವುದು ಬಿಡಿಸಿ ನೋಡೆ;
ಇದೊ ಕಣ್ಗೆ ಗೋಚರಿಸಿದಂತಿಹುದು ಅದೆ ಮತ್ತೆ
ಪೊಸ ಪದುಮಸಿರಿಯೆಸೆವ ಸತಿಯ ಮೊಗವೆ. ೨೫

ಮುತ್ತಿನ ಚಿಲ್ಪಿಂ ತೊಳಗುವ ಪಲ್ಗಳಿ-
ನೆಸೆಯುವ ತುಟಿಗಳ ಭಂಗಿಯದೆ;
ಕಿವಿಗಳ ಆಕೃತಿಯಂತೆ ಅದೆ,
ನಯನಂ ರಕ್ತಸುನೀಲಂ ಎಸೆಯುಂ
ಸೊಬಗಿನ ಪಾಂಗದು ಒಂದೆ ಇದೆ. ೨೬

(ಯೋಚಿಸಿ) ಇದೇ ವಾಲ್ಮೀಕಿಗಳು ವಾಸಿಸುವ ಅರಣ್ಯ. ಇಲ್ಲಿಯೇ ದೇವಿಯನ್ನು ಬಿಟ್ಟುಬಂದುದು. ಈ ಬಾಲಕರ ಆಕಾರ, ವಯಸ್ಸು, ಅನುಭಾವಗಳೆಲ್ಲವೂ ಇಂತಿವೆ. ಅಸ್ತ್ರಗಳು ಸ್ವತಃ ಪ್ರಕಾಶಗಳೆಂಬುದನ್ನು ವಿಚಾರಿಸಿ ನೋಡಿದರೆ, ನಾನು ಚಿತ್ರದರ್ಶನದ ಪ್ರಸಂಗದಲ್ಲಿ ಅಸ್ತ್ರಗಳಿಗಿತ್ತ ಅನುಮತಿಯೇ ಫಲಪ್ರದವಾಗಿರಬಹುದಲ್ಲವೆ? ಪೂರ್ವದವರಿಗೆ ಕೂಡ ಸಂಪ್ರದಾಯವಿಲ್ಲದೆ ಅಸ್ತ್ರಗಳ ಸಿದ್ಧಿ ಬಂದುದನ್ನೆಂದೂ ಕೇಳಿಲ್ಲ. ನನ್ನನ್ನು ಮುಳುಗಿಸಿ ತೇಲಿಸುತ್ತಿರುವ ಹೃದಯದ ಸುಖಾತಿಶಯವೂ ಇದನ್ನೇ ಪುಷ್ಟೀಕರಿಸುತ್ತದೆ. ಅವಳಿಜವಳಿಗಳೆಂಬುದೂ ನನ್ನ ಅನುಭವಕ್ಕೆ ಅನುಗುಣವಾಗಿದೆ. ದೇವಿ ಗರ್ಭಿಣಿಯಾಗಿರುವಾಗಲೇ ಶಿಶುದ್ವಯಗಳುಂಟೆಂಬುದನ್ನು ಬಹುತರವಾಗಿ ತಿಳಿದಿದ್ದೆ.

(ಕಣ್ಣೀರು ಬಿಡುತ್ತ)

ರೂಢಮೂಲವೆ ಆದ ಪ್ರೇಮವನಂದು ಪರಿಚಯ ಪೆರ್ಚಿಸೆ,
ಸಹಜಲಜ್ಜೆಯಿನಾಕೆ ಪರವಶನೇತ್ರೆಯೆನೆ ನಂಬಿರ್ದೊಡಂ;
ಕರಪರಾಮರ್ಶನಗಳಿಂದಂ ನಾನೆ ಮೊದಲಾರೈದೆನು
ಯಮಳಗರ್ಭವನಾಕೆಯರಿತಳು ಕಡೆಗೆ ದಿನಗಳು ಕಳೆಯಲು. ೨೭

(ಅತ್ತು) ಆದ್ದರಿಂದ ಏನಾದರೂ ಉಪಾಯದಿಂದ ಇವರನ್ನು ಕೇಳಿ ನೋಡಲೇ?

ಲವ—ತಂದೆ, ಇದೇನು?—

ಬಾಷ್ಪದ ವರ್ಷದಿನೀಗಳ್ ನಿಮ್ಮಯ
ತ್ರಿಜಗನ್ಮಂಗಳವಾನನವು;
ಪಡೆದುದು ಮಂಜಿನ ಮಳೆಯಿಂ ನೆನೆದಿಹ
ಸರಸೀರುಹದಾ ಸೊಬಗನ್ನು. ೨೮

ಕುಶ—ತಮ್ಮಾ,

ದೇವಿ ಸೀತೆಯನಗಲಿದೀ ರಘುಪತಿಗೆ ಬಾರದೆ ದುಃಖವು?
ಪ್ರಿಯೆಯ ನಾಶದಿನೆಲ್ಲ ಜಗವೇ ವಿಪಿನವಪ್ಪುದು ಎಂಬರು;
ಅಂದು ನೇಹವು ಇರ್ದುದಾ ಪರಿಯಿಂದು ವಿರಹವು ನಿರವಧಿ,
ರಾಮಕಥೆಯೇ ತಿಳಿಯದಿರ್ದವನಂತೆ ಕೇಳುವೆಯೇತಕೆ? ೨೯

ರಾಮ (ಸ್ವಾಗತ)—ಓ, ಇವರು ಉದಾಸೀನರಂತೆ ಮಾತನಾಡಿಕೊಳ್ಳುತ್ತಿದ್ದಾರೆ. ಕೇಳಿ ಉಪಯೋಗವಿಲ್ಲ. ಅಯ್ಯೋ, ಮುಗ್ಧಹೃದಯವೆ! ಆಕಸ್ಮಿಕವಾದ ನಿನ್ನ ಈ ತಳಮಳವೇನು? ಹೃದಯದ ಆವೇಗ ಇಷ್ಟು ಹೊರಹೊಮ್ಮುತ್ತಿರುವುದರಿಂದ ಮಕ್ಕಳೂ ನೋಡಿ ಕನಿಕರಿಸುವಂತಾಗಿದೆ. ಇರಲಿ, ವಿಷಯವನ್ನು ಬದಲಾಯಿಸುತ್ತೇನೆ. (ಪ್ರಕಾಶ) ಮಕ್ಕಳೆ, ಭಗವಾನ್ ವಾಲ್ಮೀಕಿಗಳ ಸರಸ್ವತೀನಿಷ್ಯಂದವೂ ಆದಿತ್ಯವಂಶದ ಪ್ರಶಸ್ತಿಯೂ ಆದ 'ರಾಮಾಯಣ', 'ರಾಮಾಯಣ' ಎನ್ನುವುದಿಲ್ಲವೆ? ಅದರಲ್ಲಿ ಕುತೂಹಲವಿರುವುದರಿಂದ ಸ್ವಲ್ಪ ಭಾಗವನ್ನು ಕೇಳಬಯಸುತ್ತೇನೆ.

ಕುಶ—ಆ ಇಡಿಯ ಗ್ರಂಥವನ್ನೇ ನಾವು ಬಾಯಿಪಾಠ ಮಾಡಿದ್ದೇವೆ. ಬಾಲಕಾಂಡದ ಕಡೆಯ ಅಧ್ಯಾಯದಲ್ಲಿನ ಈ ಎರಡು ಶ್ಲೋಕಗಳು ಈಗ ನೆನಪಿಗೆ ಬರುತ್ತಿವೆ.

ರಾಮ—ವತ್ಸನು ಹೇಳಬೇಕು.

ಕುಶ— ಸೀತೆಯು ಸಹಜದೆ ಪ್ರಿಯಳಾಗಿರ್ದಳು
ಆ ಮಹಿತಾತ್ಮಗೆ ರಾಮನಿಗೆ;
ಆದೊಡೆ ಆಕೆಯ ಗುಣಗಣದಿಂದಲೆ
ಪ್ರೇಮದ ರಸವದು ಬೆಳೆದಿತ್ತು. ೩೦

ಹಾಗೆಯೆ ಸೀತೆಗೆ ರಾಮನು ಆದನು
ಪ್ರಾಣಕ್ಕಿಂತಲು ಪ್ರಿಯಕರನು;
ಅವರ ಪರಸ್ಪರ ಪ್ರೀತಿಯ ಪರಿಯನು
ಬಲ್ಲುದು ಹೃದಯವೆ ಅವರುಗಳ. ೩೧

ರಾಮ—ಅಹಹ, ಹೃದಯಮರ್ಮಗಳ ಮೇಲೆ ಈ ಆಘಾತ ಅತಿದಾರುಣವಾಗಿದೆ. ಹಾ, ದೇವಿ, ಆಗ ನಿಜವಾಗಿಯೂ ಹೀಗೆಯೇ ಇದ್ದಿತು. ಸಂಸಾರದ ವೃತ್ತಾಂತಗಳೇ ಹೀಗೆ. ವಿಷಮವಾದ ವಿರಸವಿಪರ್ಯಾಸಗಳನ್ನೊದಗಿಸಿ ವಿರಹದಲ್ಲಿ ಪರ್ಯವಸಾನಗೊಂಡು ನೋಯಿಸುತ್ತವೆ.

ಎಲ್ಲಿ ಆ ಆನಂದವನಿತದು ನೆಚ್ಚಿನತಿಶಯ ತುಂಬಿದ,
ಎಲ್ಲಿ ಆ ಅನ್ಯೋನ್ಯಪ್ರೇಮವು, ಎಲ್ಲಿ ಕೌತುಕಗಾಢತೆ;
ಸುಖವೊ ದುಃಖವೊ ಹೃದಯದೈಕ್ಯವನೆಲ್ಲಿ ಕಾಣಲು ಬರ್ಪುದು;
ಆದೊಡೆನ್ನಯ ಜೀವವುಳಿದುದು, ಪಾಪಿಯೆಂತುಂ ನಿಲ್ಲದು. ೩೨

ಅಯ್ಯೋ, ಕಷ್ಟ!—

ಇನಿಯಳ ಸಾಸಿರ ಗುಣಗಳನರಳಿಸಿ-
ದೊಂದೇ ಸುಂದರ ಸಮಯವದು;
ಆವುದು ನೆನೆಯಲು ಬಹುದಾರುಣವೋ
ಅದನೇ ಸ್ಮರಣೆಗೆ ತಂದಿಹರು. ೩೩

ಕೆಲವು ಕೆಲವಾಗುರುಳೆ ದಿನಗಳು ಮೆಲ್ಲಮೆಲ್ಲನೆ ಆಕೆಯ
ಕುಚದ ಕುಟ್ಮಲವಿನಿತು ಪಸರಿಸಿದತ್ತು, ಹರಿಣೀನೇತ್ರೆಯ;
ವಯುವು ನೇಹವು ಬಯಕೆಯೆಲ್ಲವು ಘನತೆಯಿೀಯಲು ಮದನಸು
ಪ್ರೌಢತನವನು ಮೆರೆದನೆದೆಯೊಳು, ವೈಯೊಳಿರ್ದನು ಮುಗ್ಧನು. ೩೪

ಲವ—ಇದು ಚಿತ್ರಕೂಟವನದ ದಾರಿಯಲ್ಲಿ ಮಂದಾಕಿನಿಯ ದಂಡೆಯ ಮೇಲೆ ಸೀತಾದೇವಿಯನ್ನು ಕುರಿತು ರಘುಪತಿ ಹೇಳಿದ ಶ್ಲೋಕ—

ನಿನಗಾಗಿ ಇಟ್ಟಂತೆ ಈ ಶಿಲೆಯು ಶೋಭಿಪುದು
ಇದೊ ನಿನ್ನ ಮುಂದುಗಡೆಯೆ;
ಇದರ ಸುತ್ತಲು ನೋಡು ಪೂಮಳೆಯ ಕರೆದಂತೆ
ಕಾಣುವುದು ಕೇಸರತರು. ೩೫

ರಾಮ (ಲಜ್ಜೆ, ನಸುನಗೆ, ಪ್ರೀತಿ, ಶೋಕಗಳಿಂದ)—ಶಿಶುಗಳು, ಅದರಲ್ಲೂ ಅರಣ್ಯವಾಸಿಗಳು, ಏನೂ ಅರಿಯದವರು. ಹಾ ದೇವಿ, ನಮ್ಮ ರಹಸ್ಯವಿನೋದಗಳಿಗೆ ಸಾಕ್ಷಿಯಾಗಿದ್ದ ಆ ಪ್ರದೇಶ ನೆನಪಿದೆಯೇ? ಕಷ್ಟ, ಅಯ್ಯೋ, ಕಷ್ಟ.

ಬೆವರ ಹನಿಯು ತಂಪನೀಯೆ ಗಂಗೆಯೆಲರು ಮೆಲ್ಲನೆ
ಸುಳಿಯೆ ಚಲಿಪ ಕುರುಳ್ಗಳಿಂದ ಹಣೆಯು ಚಂದ್ರನಂತಿರೆ;
ಕುಂಕುಮಂಗಳಿರದೆ ಕೆನ್ನೆ ಪೊಳೆಯೆ ಸಹಜವರ್ಣದೆ,
ನೆನೆವೆನೊಡವೆಯಿರದ ಕಿವಿಯ ಬೆಡಗನಾಂತ ಮೊಗವನು. ೩೬

(ಸ್ತಂಭೀಭೂತನಾದಂತೆ ನಿಂತು ಶೋಕದಿಂದ) ಅಹಾ, ವಿಚಿತ್ರವೇ ಸರಿ—
ಮತ್ತೆ ಮತ್ತೆನೆ ಚಿಂತಿಸುತ್ತುಂ ಮುಂದೆ ನಿರ್ಮಿಸಿ ಇಟ್ಟವೋಲ್
ನಿಂದ ಪ್ರಿಯಜನ ವಿರಹದಲ್ಲಿಯು ಮನಕೆ ಸಾಂತ್ವನವೀವುದು;
ಆ ವಿಕಲ್ಪವೆ ಅಳಿಯೆ ಜಗವೇ ಅಹುದು ಜೀರ್ಣಾರಣ್ಯವು,
ಹೊಟ್ಟ ರಾಶಿಯೊಳಿಟ್ಟು ಹೃದಯವನಾಗ ಬೇಯಿಪರೆನಿಪುದು. ೩೭

(ತೆರೆಯಲ್ಲಿ)

ಮುನಿವಸಿಷ್ಠರು, ಮತ್ತೆ ವಾಲ್ಮೀಕಿಗಳು, ದಶರಥಸತಿಯರು,
ಆ ಅರುಂಧತಿ ಜನಕರಂಜುತೆ ಕೇಳುತಣುಗರ ಕಲಹವ;
ತಮ್ಮ ಮುದಿಮೈಯಿಂದೆ ಮೆಲ್ಲನೆ ಬರ್ಪರೊಡಲೇ ಜಡವೆನೆ
ದೂರದಾಶ್ರಮದಿಂದೆ, ತಮ್ಮಯ ಮನದೊಳಾತುರವಿರ್ದೊಡಂ. ೩೮

ರಾಮ—ಏನು? ಭಗವತಿ ಅರುಂಧತಿ, ವಸಿಷ್ಠ, ತಾಯಿಯರು, ಜನಕ, ಎಲ್ಲರೂ ಇಲ್ಲಿಯೇ ಇರುವರೆ? ಕಷ್ಟ, ಇವರನ್ನೆಲ್ಲ ಹೇಗೆ ನೋಡಲಿ? (ಶೋಕದಿಂದ ನೋಡುತ್ತ) ಅಹಹಾ, ತಾತ ಜನಕನೂ ದೈವವಶಾತ್ ಇಲ್ಲಿಯೇ ಬಂದಿರು

ವನೆನ್ನುವುದು ಮಂದಭಾಗ್ಯನಾದ ನನ್ನನ್ನು ವಜ್ರದಿಂದ ಹೊಡೆದಂತೆಯೆ ಸರಿ.

ಇಷ್ಟೊತ್ತು ಸಂಬಂಧವೆನ್ನುತೆ ನಲಿದು ಕೂಡಿದ ತಾತರಂ
ಕಂಡು ಲಗ್ನದ ಶುಭವ ಸಮಯದೊಳಂದು ನೆರೆಯೆ ವಸಿಷ್ಠರುಂ ;
ಇಂತು ಭೂರಿಯನರ್ಥವೊದಗಿರಲೆಂತು ಮಾವನ ಕಾಣುತುಂ
ಸೀಳಿಸೋ ನೂರಾಗಿ ? ಅಥವಾ ರಾಮಗಾವುದು ದುಷ್ಕರಂ ? ೩೯

(ತೆರೆಯಲ್ಲಿ)

ಓ, ಕಷ್ಟ, ಕಷ್ಟ.

ಅನುಭಾವವೊಂದರೊಳೆ ಕಾಂತಿಯೆಲ್ಲವು ನಿಂತ
ಈ ಪರಿಯ ರಾಮನನು ಥೋಂಕನೆಯೆ ಕಂಡು ;
ಮೊದಲು ಮೂರ್ಛೆಗೆ ಸಂದ ಜನಕನನು ಸಂತೈಸಿ
ದುಗುಡದಿಂ ರಾಣಿಯರು ಮೂರ್ಛೆಯೈದಿಹರು. ೪೦

ರಾಮ—ಹಾ ತಾತ, ಹಾ ತಾಯಂದಿರೆ, ಹಾ ಜನಕ,

ಜನಕರಘೂತ್ತಮ ಕುಲಗಳಿಗೆರಡಕೆ
ಆವಳೊ ಒರ್ವಳೆ ಶುಭಕರಳು ;
ಆಕೆಯೊಳಕರುಣಿ ಪಾಪಿಯು ಎನ್ನೊಳು
ಸಲ್ಲವು ನಿಮ್ಮಯ ಕರುಣೆಗಳು. ೪೧

ಅವರಿಗೆ ನನ್ನ ಗೌರವವನ್ನಾದರೂ ಸಲ್ಲಿಸುತ್ತೇನೆ. (ಏಳುವನು.)

ಕುಶಲವರು—ತಂದೆಯವರು ಇತ್ತ ಬರಬೇಕು.

(ಶೋಕಾಕುಲರಾಗಿ ಎಲ್ಲರೂ ನಿಷ್ಕ್ರಮಿಸುವರು.)

ಇಲ್ಲಿಗೆ 'ಕುಮಾರಪ್ರತ್ಯಭಿಜ್ಞಾನ' ಎಂಬ
ಆರನೆಯ ಅಂಕ ಮುಗಿದುದು

# ಏಳನೆಯ ಅಂಕ

(ಪ್ರವೇಶ—ಲಕ್ಷ್ಮಣ)

ಲಕ್ಷ್ಮಣ—ಈ ದಿನ ವಾಲ್ಮೀಕಿಮುನಿಗಳು ಬ್ರಾಹ್ಮಣರು, ಕ್ಷತ್ರಿಯರು, ಪೌರ ಜಾನಪದರು, ಮುಂತಾದ ಪ್ರಜೆಗಳನ್ನೂ ನಮ್ಮೆಲ್ಲರನ್ನೂ ಕರೆಸಿರುವುದಲ್ಲದೆ, ತಮ್ಮ ಪ್ರಭಾವದಿಂದ ದೇವತೆಗಳು, ರಾಕ್ಷಸರು, ತಿರ್ಯಗ್ಯೋನಿಗಳು, ನಾಗಶ್ರೇಷ್ಠರು ಮುಂತಾದವರನ್ನೂ ನಿಖಿಲ ಚರಾಚರ ಭೂತಜಾತವನ್ನೂ ಬರಮಾಡಿಕೊಂಡಿದ್ದಾರೆ. ನನಗೆ ಅಣ್ಣನು ಮಾಡಿರುವ ಅಪ್ಪಣೆಯಿದು— 'ವತ್ಸ, ಲಕ್ಷ್ಮಣ, ಅಪ್ಸರೆಯರು ಆಡಿ ತೋರಿಸುವ ತಮ್ಮ ನಾಟಕಕೃತಿಯನ್ನು ಬಂದುನೋಡಬೇಕೆಂದು ವಾಲ್ಮೀಕಿಗಳೇ ನಮ್ಮನ್ನು ಕರೆಯಿಸಿದ್ದಾರೆ. ರಂಗಸ್ಥಲ ಗಂಗಾತೀರದಲ್ಲಿದೆ. ಅಲ್ಲಿಗೆ ಹೋಗಿ ಪ್ರೇಕ್ಷಕರ ಆಸನ ವ್ಯವಸ್ಥೆಯನ್ನು ನೋಡಿಕೋ' ಎಂದು. ಮರ್ತ್ಯರಿಗೂ ಅಮರ್ತ್ಯರಿಗೂ ಎಲ್ಲರಿಗೂ ಯಥೋಚಿತವಾದ ಸ್ಥಾನಗಳನ್ನು ಕಲ್ಪಿಸಿದ್ದಾಯಿತು. ಈಗ—

> ರಾಜ್ಯದ ಪದವಿಯೊಳಿರ್ದೊಡಮಣ್ಣನು
> ಕಷ್ಟಮುನಿವ್ರತವನು ಕೊಂಡು ;
> ವಾಲ್ಮೀಕಿಗಳೊಳ್ ಗೌರವದಿಂದಂ
> ಮೆಲ್ಲನೆಯಿತ್ತಲ್ ಬರುತಿಹನು. ೧

(ಪ್ರವೇಶ—ರಾಮ)

ರಾಮ—ವತ್ಸ, ಲಕ್ಷ್ಮಣ, ನಾಟಕದ ಪ್ರೇಕ್ಷಕರೆಲ್ಲರೂ ಆಸನಗಳಲ್ಲಿ ಕುಳಿತಿರುವರೆ ?

ಲಕ್ಷ್ಮಣ—ಹೌದು.

ರಾಮ—ಮಕ್ಕಳಾದ ಕುಶಲವರಿಬ್ಬರಿಗೂ ಚಂದ್ರಕೇತುವಿಗೆ ಸಮಾನವಾದ ಆಸನಗಳನ್ನು ಕೊಡಬೇಕು.

ಲಕ್ಷ್ಮಣ—ಪ್ರಭುವಿನ ಪ್ರೀತಿ ಗೊತ್ತಿರುವುದರಿಂದ ಹಾಗೆಯೇ ಮಾಡಿದ್ದೇನೆ. ಇದೋ ಇಲ್ಲಿ ರಾಜಾಸನವು ಸಿದ್ಧವಾಗಿದೆ. ಆರ್ಯನು ಕುಳಿತುಕೊಳ್ಳಬೇಕು.

(ರಾಮನು ಕುಳ್ಳಿರುವನು)

ಲಕ್ಷ್ಮಣ—ಏ, ನಾಟಕ ಆರಂಭವಾಗಲಿ.

ಸೂತ್ರಧಾರ—(ಪ್ರವೇಶಿಸಿ) ನೋಡಿರಿ! ಸತ್ಯವಚನರಾದ ವಾಲ್ಮೀಕಿಗಳು ಚರಾಚರ ಜಗತ್ತಿಗೆ ಹೀಗೆ ಆಜ್ಞಾಪಿಸುತ್ತಾರೆ—'ನಾವು ಆರ್ಷ ದರ್ಶನದಿಂದ ಕಂಡುದನ್ನು ಹೀಗೆ ತೋರಿಸುತ್ತಿದ್ದೇವೆ. ಈ ವಚನಾಮೃತವು ಪಾವನವಾದುದು: ಇದರಲ್ಲಿ ಕರುಣ, ಅದ್ಭುತ ರಸಗಳೆರಡೂ ಕೂಡಿವೆ. ವಿಷಯ ಉದಾತ್ತವಾದುದರಿಂದ ಎಲ್ಲರೂ ಲಕ್ಷ್ಯವಿಟ್ಟು ನೋಡಬೇಕು,' ಎಂದು.

ರಾಮ—ಇದರ ತಾತ್ಪರ್ಯವಿಷ್ಟೆ—ಋಷಿಗಳಿಗೆ ಸರ್ವವಿಷಯಗಳೂ ಪ್ರತ್ಯಕ್ಷ ಗಮ್ಯ. ಆ ಮಹಾತ್ಮರ ಜ್ಞಾನಗಳು ಅಮೃತಪೂರ್ಣ ಮತ್ತು ದೋಷದೂರ. ಯಾವಾಗಲೂ ಅವು ಸುಳ್ಳಾಗಲಾರವು. ಆದ್ದರಿಂದ ಯಾರೂ ಸಂಶಯ ಪಡಲಾಗದು, ಎಂದು.

(ತೆರೆಯಲ್ಲಿ)

ಹಾ ಆರ್ಯಪುತ್ರ! ಹಾ ಕುಮಾರ ಲಕ್ಷ್ಮಣ: ನಾನು ಏಕಾಕಿನಿ, ಅನಾಥೆ; ಈ ಕಾಡಿನಲ್ಲಿ, ಪ್ರಸವವೇದನೆಯುಂಟಾಗುತ್ತಿರುವ, ಹತಾಶಳಾದ ನನ್ನನ್ನು ಕ್ರೂರ ಮೃಗಗಳು ತಿನ್ನಲು ನೋಡು ತ್ತಿವೆ. ಆದ್ದರಿಂದ ಮಂದಭಾಗಿನಿಯಾದ ನಾನು ಭಾಗೀರಥಿ ಯಲ್ಲಿ ಹೋಗಿ ಬಿದ್ದುಬಿಡುತ್ತೇನೆ.

ಲಕ್ಷ್ಮಣ—(ಸ್ವಗತ) ಅಯ್ಯೋ, ಇದೇನೋ ಬೇರೊಂದು ಮೊದಲಾಗಿದೆ.

ಸೂತ್ರಧಾರ—ಭೂಮಿತನೂಜೆಯು ದೇವಿಯು ನೃಪನಿಂ
ತ್ಯಕ್ತಳಿದೋ ಪೇರಡವಿಯೊಳು;
ಪ್ರಸವದ ಕಾಲ ಸಮೀಪಿಸಲೀಗಳ್
ಗಂಗೆಯೊಳುಳಿವಳು ಹರಣವನು. ೨

## (ಪ್ರಸ್ತಾವನೆ)

ರಾಮ—(ಉದ್ವೇಗದಿಂದ) ದೇವಿ, ದೇವಿ, ಲಕ್ಷ್ಮಣನನ್ನಾದರೂ ನೋಡುವು ದಿಲ್ಲವೆ?

ಲಕ್ಷ್ಮಣ—ಆರ್ಯ, ಇದು ನಾಟಕ.

ರಾಮ—ಹಾ ದೇವಿ, ದಂಡಕಾರಣ್ಯವಾಸಪ್ರಿಯಸಖಿ, ಇದು ನಿನಗೆ ರಾಮ ನಿಂದುಂಟಾದ ದುರ್ದೈವ.

ಲಕ್ಷ್ಮಣ—ಆರ್ಯ, ನಾಟಕ ಹೇಗೆ ಮುಂದುವರಿಯುವುದೋ ನೋಡೋಣ.

ರಾಮ—ಇದೋ, ವಜ್ರಮಯವಾದ ಮನಸ್ಸಿನಿಂದ ಸಿದ್ಧವಾಗಿದ್ದೇನೆ.

(ಪ್ರವೇಶ—ತೊಡೆಯ ಮೇಲೆ ಒಂದೊಂದು ಶಿಶುವನ್ನೆತ್ತಿಕೊಂಡ ಪೃಥಿವೀ ಗಂಗೆಯರು ; ಅವರು ಎತ್ತಿ ಹಿಡಿದ ಸೀತೆ)

ದೇವಿಯರು—ಮಂಗಳೆ ಧೈರ್ಯವ ತಾಳೌ ಸೀತೆಯೆ,
ನಿನ್ನಯ ಭಾಗ್ಯೋದಯವಹುದು ;
ನೀರೊಳು ಹಡೆದಿಹೆ ಮಕ್ಕಳನಿರ್ವರ
ರಘುವಂಶವನುದ್ಧರಿಸಲೆನೆ. ೩

ಸೀತೆ—(ಸಂತೈಸಿಕೊಂಡು) ಇಬ್ಬರು ಗಂಡುಮಕ್ಕಳನ್ನು ಹಡೆದುದು ನನ್ನ ಭಾಗ್ಯ. ಹಾ ಆರ್ಯಪುತ್ರ !

ಲಕ್ಷ್ಮಣ—(ಕಾಲಿಗೆ ಬಿದ್ದು) ಆರ್ಯ, ಆರ್ಯ, ನಮ್ಮ ಅದೃಷ್ಟ ಚೆನ್ನಾಗಿದೆ. ರಘುಕುಲಕ್ಕೆ ಶುಭಕರವಾದ ಕುಡಿ ಮೂಡಿದೆ. (ನೋಡಿ) ಅಯ್ಯೋ, ಅಯ್ಯೋ, ಒತ್ತರಿಸಿ ಬರುತ್ತಿರುವ ಕಣ್ಣೀರುಗಳಿಂದ ಆರ್ಯನು ಮೂರ್ಛೆ ಹೋದನಲ್ಲಾ ! (ಗಾಳಿ ಬೀಸುವನು)

ಪೃಥಿವಿ—ಮಗಳೆ, ಸಂತೈಸಿಕೊ.

ಸೀತೆ—(ಸಂತೈಸಿಕೊಂಡು) ದೇವತೆಗಳೇ, ನೀವಿಬ್ಬರೂ ಯಾರು ? ನನ್ನನ್ನು ಬಿಟ್ಟುಬಿಡಿ.

ಪೃಥಿವಿ—ಈಕೆ ನಿನ್ನ ಮಾವನ ಮನೆಯ ಕುಲದೇವತೆ—ಭಾಗೀರಥಿ.

ಸೀತೆ—ಭಗವತಿ, ನಮಸ್ಕಾರ.

ಭಾಗೀರಥಿ—ನಿನ್ನ ಚಾರಿತ್ರಕ್ಕೆ ಯೋಗ್ಯವಾದ ಕಲ್ಯಾಣಗಳನ್ನು ಪಡೆ.

ಲಕ್ಷ್ಮಣ—ಅನುಗೃಹೀತರಾದೆವು.

ಭಾಗೀರಥಿ—ಈಕೆ ನಿನ್ನ ತಾಯಿ—ವಿಶ್ವಂಭರೆ.

ಸೀತೆ—ಹಾ, ತಾಯಿ, ಈ ಅವಸ್ಥೆಯಲ್ಲಿ ನೀನು ನನ್ನನ್ನು ಕಾಣುವಂತಾಗಿದೆ.

ಪೃಥಿವಿ—ವತ್ಸೆ ಬಾ ಬಾ, ಮಗಳೆ.

(ಇಬ್ಬರೂ ಅಪ್ಪಿಕೊಂಡು ಮೂರ್ಛೆ ಹೋಗುವರು.)

ಲಕ್ಷ್ಮಣ—ಅದೃಷ್ಟವೇ ಸರಿ. ಅತ್ತಿಗೆಗೆ ಗಂಗೆ ಪೃಥ್ವಿಯರ ಆಸರೆ ದೊರೆಯಿತು.

ರಾಮ—(ನೋಡಿ) ಬರಬರುತ್ತ ಮತ್ತೂ ಶೋಕಮಯವಾಗುತ್ತಿರುವುದೂ ಅದೃಷ್ಟವೇ.

ಭಾಗೀರಥಿ—ಭಗವತಿ ವಿಶ್ವಂಭರೆಯೂ ಗೋಳಾಡುವಳೆಂದ ಮೇಲೆ ಮಕ್ಕಳ ಪ್ರೀತಿ ಎಷ್ಟು ಮಹತ್ತರವಾದುದು; ಅಥವಾ ಅದು ಸರ್ವರಿಗೂ ಸಾಧಾರಣವಾಗಿರತಕ್ಕ ಮನಸ್ಸಿನ ಒಂದು ಮೋಹ ಗ್ರಂಥಿ; ಸಚೇತನರೆಲ್ಲರನ್ನೂ ಅಲ್ಲಾಡಿಸುವ ಉಪಪ್ಲವ; ಈ ಸಂಸಾರದ ಜೀವತಂತು. ದೇವಿ ಭೂತಧಾತ್ರಿ, ವತ್ಸೆ ವೈದೇಹಿ, ಸಮಾಧಾನರಾಗಿ.

ಪೃಥಿವಿ—ದೇವಿ, ಸೀತೆಯನ್ನು ಹಡೆದು ಸಮಾಧಾನವಾಗಿರಲು ಸಾಧ್ಯವೆ?

ಅಸುರಸಹವಾಸವನು ಚಿರಕಾಲ ತಾಳಿದಳು
ಬಳಿಕ ದುಸ್ಸಹವಾದ ತ್ಯಾಗವಾಯ್ತು;

ಭಾಗೀರಥಿ—ಪಾಕಾಭಿಮುಖವಾಗೆ ದೈವವೇ ಜೀವಿಗಾ
ದ್ವಾರಗಳ ಮುಚ್ಚಿಸಲು ಶಕ್ತರಾರು? ೪

ಪೃಥಿವಿ—ಭಗವತಿ ಗಂಗೆ, ಎಲ್ಲವೂ ಸರಿಯೆ, ಆದರೆ ನಿಮ್ಮ ರಾಮ ಭದ್ರನಿಗಲ್ಲ.

ಬಾಲ್ಯದೆ ಬಾಲನೆ ಪಿಡಿದಾ ಪಾಣಿಯೆ
ಪ್ರಮಾಣವಲ್ಲವು ಆತನಿಗೆ;
ಲೆಕ್ಕಿಸನೆನ್ನನು ಜನಕನನಗ್ನಿಯ,
ಅನುವೃತ್ತಿಯ ಮೇಣ್ ಸಂತತಿಯ. ೫

ಸೀತೆ—ಹಾ, ಆರ್ಯಪುತ್ರನ ಸ್ಮರಣೆ ಬರುತ್ತಿದೆ.

ಪೃಥಿವಿ—ಹಾ, ಆರ್ಯಪುತ್ರಸಂತೆ; ನಿನಗೆ ಯಾರು?

ಸೀತೆ—(ಲಜ್ಜೆ, ಬಾಷ್ಪಗಳಿಂದ) ನಿಜ, ತಾಯಿ ಹೇಳುವುದೇ ನಿಜ.

ರಾಮ—ಅಮ್ಮಾ, ಭೂಮಿತಾಯಿ, ನಾನು ಇಂತಹವನೇ ಹೌದು.

ಭಾಗೀರಥಿ—ಭಗವತಿ ವಸುಂಧರೆ, ಈ ಸಂಸಾರಕ್ಕೇ ನೀನು ಶರೀರ ಳಾಗಿರುವೆ. ಏನೂ ಅರಿಯದವಳಂತೆ ಅಳಿಯನ ಮೇಲೇಕೆ ಕೋಪಿಸುವೆ?

ಘೋರ ದುರ್ಯಶ ಪಸರಿಸಿರ್ದುದು ಜಗದೊಳಗ್ನಿವಿಶುದ್ಧಿಯು
ನಡೆಯೆ ಲಂಕೆಯೊಳವನು ಇಲ್ಲಿಯ ಜನರು ನಂಬಲ್ಕಕ್ಕುಮೇ ;
ಸಕಲಜನರನು ಮೆಚ್ಚಿಸಲ್ಬೇಕೆಂಬುದೊಂದೇ ಕುಲಧನ
ನೆಗಳ್ದ ಆ ಇಕ್ಷ್ವಾಕುವಂಶದೆ, ವತ್ಸನೇವನು ವಿಷಮದೆ ? ೬

ಲಕ್ಷ್ಮಣ—ದೇವತೆಗಳಿಗೆ ಸರ್ವಜೀವಿಗಳ ವಿಷಯದಲ್ಲಿಯೂ ಅವ್ಯಾಹತವಾದ ಅಂತಃಪ್ರಕಾಶವೇ ಇರುತ್ತದೆ.

ಭಾಗೀರಥಿ—ಆದರೂ ಇದೋ ಕೈಮುಗಿದು ಬೇಡುತ್ತಿರುವೆನು.

ರಾಮ—ತಾಯೆ, ಭಗೀರಥನ ಕುಲದವರ ವಿಷಯದಲ್ಲಿಯೂ ನಿನ್ನ ಪ್ರಸಾದ ಒಂದೇ ಸಮನಾಗಿ ನಿಂತಿದೆ.

ಪೃಥಿವಿ—ಯಾವಾಗಲೂ ನಿಮ್ಮ (ಮತ್ತು 'ನಿಮ್ಮವರ') ವಿಷಯದಲ್ಲಿ ನಾನು ಪ್ರಸನ್ನಳೇ. ಆದರೆ ಆಪಾತದುಸ್ಸಹವಾದ ಪ್ರೇಮಾವೇಗದಿಂದ ಹಾಗೆ ಹೇಳಿದೆ. ರಾಮಭದ್ರನಿಗೆ ಸೀತೆಯಲ್ಲಿ ಎಷ್ಟು ಪ್ರೀತಿಯೆಂಬುದನ್ನು ನಾನು ಕಾಣೆನೇ ?—

ದೈವಕೆ ಪರವಶನೆನೆ ವತ್ಸೆಯನವ-
ನುಳಿದನು ; ದಹಿಸುವ ಮನದಿಂದೆ ;
ಅತಿಶಯ ಧೈರ್ಯದೆ ಬದುಕಿಹನೆಂತೋ
ಪ್ರಜೆಗಳ ಪುಣ್ಯದ ಬಲದಿಂದೆ. ೭

ರಾಮ—ಹಿರಿಯರು ಮಕ್ಕಳ ವಿಷಯದಲ್ಲಿ ಕರುಣೆಯುಳ್ಳವರು.

ಸೀತೆ—(ಅಳುತ್ತ ಕೈಮುಗಿದುಕೊಂಡು) ತಾಯಿಯು ತನ್ನ ಅಂಗಗಳಲ್ಲಿಯೇ ನನ್ನನ್ನು ಅಡಗಿಸಿಕೊಂಡುಬಿಡಬೇಕು.

ರಾಮ—ಇನ್ನೇನು ತಾನೆ ಹೇಳಿಯಾಳು.

ಭಾಗೀರಥಿ—ಶಾಂತಂ ಪಾಪಂ. ಇನ್ನೂ ಸಹಸ್ರ ವರ್ಷಗಳ ಕಾಲ ಅಡಗದೆ ಇರುವಂತಾಗಲಿ.

ಪೃಥಿವಿ—ಮಗಳೆ, ಇಬ್ಬರು ಮಕ್ಕಳನ್ನೂ ನೀನು ನೋಡಿಕೊಳ್ಳಬೇಕಾಗಿದೆ.

ಸೀತೆ—ನಾನು ಅನಾಥೆಯಾಗಿದ್ದೇನೆ. ಇವುಗಳನ್ನು ಕಟ್ಟಿಕೊಂಡು ಏನುಮಾಡಲಿ ?

ರಾಮ—ಹೃದಯುವೆ, ನೀನು ವಜ್ರವೇ ಹೌದು.

ಭಾಗೀರಥಿ—ನೀನು ಸನಾಥೆಯಾಗಿದ್ದರೂ ಅನಾಥೆ ಹೇಗೆ?

ಸೀತೆ—ಈ ಅಭಾಗ್ಯಳು ಸನಾಥೆ ಹೇಗೆ ಆದಾಳು?

ದೇವಿಯರು—ಲೋಕಮಂಗಳೆಯಪ್ಪ ನಿನ್ನನೆ
ನೀನೆ ಭಂಗಿಸಿಕೊಳ್ಳುವದೆ?
ನಿನ್ನ ಸಂಗದಿನೆಮ್ಮ ಇರ್ವರ
ಪಾವನತ್ವವು ಹೆಚ್ಚಿದೆ. ೮

ಲಕ್ಷ್ಮಣ—ಆರ್ಯ, ಕೇಳೋಣವಾಗಲಿ.

ರಾಮ—ಜನಗಳು ಕೇಳಲಿ.

(ತೆರೆಯಲ್ಲಿ ಕಲಕಲ)

ರಾಮ—ಇದೇನೋ ಮತ್ತೂ ಅದ್ಭುತವಾದುದು!

ಸೀತೆ—ಇದೇನು ಕಲಕಲದಿಂದ ತುಂಬಿ ಗಗನವೇ ತಳತಳಿಸುತ್ತಿದೆ!

ದೇವಿಯರು—ತಿಳಿಯಿತು—

ಕೃಶಾಶ್ವ ಕೌಶಿಕ ರಾಘವನೆಂಬೀ
ಗುರುಗಳ ಪರಿವಿಡಿ ದೊರೆಕೊಂಡ;
ಶಸ್ತ್ರಗಳೆಲ್ಲವು ಜೃಂಭಕದೊಂದಿಗೆ
ಆವಿರ್ಭವಿಸಿವೆ ತಾವಾಗಿ. ೯

(ತೆರೆಯಲ್ಲಿ)

ಸೀತಾದೇವಿಯೆ ನಿನಗೆ ಪ್ರಣಾಮವು
ನಿನ್ನಯ ಮಕ್ಕಳೆ ಗತಿಯೆಮಗೆ;
ಅವರಿಂಗೆಮ್ಮನು ರಾಮನೆ ಇತ್ತಿರೆ
ಚಿತ್ರವ ನೋಡುವ ಸಮಯದೊಳೆ. ೧೦

ಸೀತೆ—ಸುದೈವದಿಂದ ಬಂದ ಅಸ್ತ್ರದೇವತೆಗಳೇ ಇವು. ಹಾ ಆರ್ಯ ಪುತ್ರ, ಇನ್ನೂ ನಿನ್ನ ಅನುಗ್ರಹಗಳು ಫಲಪ್ರದವಾಗಿಯೇ ಇವೆ.

ಲಕ್ಷ್ಮಣ—ಹೌದು, ಸರ್ವಥಾ ನಿನ್ನ ಮಕ್ಕಳಿಗೂ ಇವು ಸಿದ್ಧಿಸುವುವೆಂದು ಆರ್ಯನು ಅತ್ತಿಗೆಗೆ ಹೇಳಿದ್ದುಂಟು.

ದೇವಿಯರು—ನಮಿಪೆವು ಪರಮಾಸ್ತ್ರಂಗಳೆ ನಿಮಗೆ
ಧನ್ಯರು ನಾವೀ ಕೃಪೆಯಿಂದೆ;
ಮಕ್ಕಳು ನಿಮ್ಮನು ನೆನೆಯುವ ಪದದೊಳೆ
ಬರ್ಪುದು ನಿಮಗಂ ಶುಭಮಕ್ಕೆ. ೧೧

ರಾಮ— ಶೋಕದ ಅಲೆಗಳು ಏಳುತ್ತೆನಗೆ
ಅವುದೊ ದಶೆಯನ್ನೊಡರಿಸಿವೆ;
ವಿಸ್ಮಯದಂತಾನಂದವು ಕೂಡುತೆ
ಅಲೆಗಳ ಜರ್ಜರಗೊಳಿಸುತಿವೆ. ೧೨

ದೇವಿಯರು—ಆನಂದಿಸು, ಮಗಳೆ, ಆನಂದಿಸು. ನಿನ್ನ ಮಕ್ಕಳು ಈಗ ರಾಮಭದ್ರನಿಗೆ ಸರಿಸಮಾನರೇ ಆಗಿಬಿಟ್ಟರು.

ಸೀತೆ—ದೇವತೆಯರೆ, ಇವರಿಗೆ ಕ್ಷತ್ರಿಯಯೋಗ್ಯವಾದ ಸಂಸ್ಕಾರ ಮಾಡುವವರು ತಾನೆ ಯಾರು?

ರಾಮ— ಈಕೆ ವಸಿಷ್ಠನೆ ಗುರುವಾಗಿರುವಾ
ರಘುವಂಶಕೆ ತಾಂ ವರ್ಧನಿಯು;
ಸೀತೆಗೆ ಮಕ್ಕಳ ಸಂಸ್ಕಾರಂಗಳ
ಗೈವವರಿಲ್ಲವೆ ಅಕಟಕಟಾ. ೧೩

ಭಾಗೀರಥಿ—ಮಗಳೆ, ಈ ಚಿಂತೆ ನಿನಗೇಕೆ? ಮಕ್ಕಳು ಸ್ತನ್ಯಪಾನವನ್ನು ಬಿಟ್ಟೊಡನೆ ಪೂಜ್ಯವಾಲ್ಮೀಕಿಮುನಿಗೆ ಒಪ್ಪಿಸಿಕೊಡುವೆನು. ಆತನು ಇವರಿಗೆ ಕ್ಷತ್ರಿಯ ವಿಧಿಗಳನ್ನು ನೆರವೇರಿಸುವನು.

ವಸಿಷ್ಠ ಅಂಗಿರಸಾಖ್ಯಮುನೀಂದ್ರರ
ಸದೃಶನು ಮುನಿವರ ವಾಲ್ಮೀಕಿ;
ಜನಕರಘೂತ್ತಮ ವಂಶಗಳೆರಡರ
ಗುರುವೇ ಆತನು ಅವರಂತೆ. ೧೪

ರಾಮ—ಭಗವತಿಯ ಯೋಚನೆ ಯೋಗ್ಯವಾಗಿದೆ.

ಲಕ್ಷ್ಮಣ—ಆರ್ಯ, ನಿಜವನ್ನು ಬಿನ್ನವಿಸುತ್ತೇನೆ. ಎಲ್ಲ ತೆರದಿಂದಲೂ ಈ ಕುಶ ಲವರೇ ಆ ಮಕ್ಕಳಾಗಿರಬೇಕು.

ಇವರ್ಗಳ ಅಸ್ತ್ರವು ಜನ್ಮದೆ ಸಿದ್ಧವು
ಇವರ್ಗಳ ಗುರುವೂ ವಾಲ್ಮೀಕಿ;
ನಿನ್ನನೆ ಪೋಲುವರಾಕೃತಿಯಿಂದೆನೆ
ವೀರರು, ವರುಷಗಳೀರಾರು. ೧೫

ರಾಮ—ಮಕ್ಕಳು ಎಂದುಕೊಂಡೇ ನನ್ನ ಹೃದಯ ಉಕ್ಕಿ ಹರಿದು ಮುಗ್ಧನಾಗಿದ್ದೇನೆ.

ಪೃಥಿವಿ—ಬಾ ಮಗಳೆ, ರಸಾತಲವನ್ನು ಪವಿತ್ರಗೊಳಿಸು.

ರಾಮ—ಹಾ ಪ್ರಿಯೆ, ಲೋಕಾಂತರಕ್ಕೈದಿದೆಯಾ!

ಸೀತೆ—ತಾಯಿಯು ನನ್ನನ್ನು ಸ್ವಗರ್ಭದಲ್ಲೇ ಅಡಗಿಸಿಕೊಳ್ಳಬೇಕು. ಇಂತಹ ಜೀವಲೋಕಪರಿವರ್ತನವನ್ನು ನಾನು ಸಹಿಸಲಾರೆ.

ರಾಮ—ಇದಕ್ಕೆ ಏನು ಉತ್ತರ ಹೇಳುವಳೋ!

ಪೃಥಿವಿ—ಮಕ್ಕಳು ಸ್ತನ್ಯವನ್ನು ಬಿಡುವವರೆಗೂ ಅವನ್ನು ನೋಡಿಕೊಳ್ಳಬೇಕೆಂದು ನನ್ನ ಅಪ್ಪಣೆ. ಆಮೇಲೆ ಹೇಗೆ ಇಷ್ಟವೋ ಹಾಗೆ ಮಾಡುವೆನು.

ಭಾಗೀರಥಿ—ಹಾಗೆಯೇ ಸರಿ.

(ನಿಷ್ಕ್ರಮ—ದೇವಿಯರು ಮತ್ತು ಸೀತೆ)

ರಾಮ—ಓ, ವೈದೇಹಿಯ ವಿಲಯಕ್ಕೇ ಬಂದು ನಿಂತಿತೇ! ಹಾ ದೇವಿ, ದಂಡಕಾರಣ್ಯವಾಸಪ್ರಿಯಸಖಿ, ಹಾ ಚಾರಿತ್ರದೇವತೆ, ಲೋಕಾಂತರಕ್ಕೆ ಹೋಗಿಬಿಟ್ಟೆಯಾ!

(ಮೂರ್ಛೆ ಹೋಗುವನು)

ಲಕ್ಷ್ಮಣ—ಪೂಜ್ಯ ವಾಲ್ಮೀಕಿಗಳೇ, ಕಾಪಾಡಿ, ಕಾಪಾಡಿ. ಇದೇ ನಿಮ್ಮ ಕಾವ್ಯದ ಅರ್ಥವೆ?

(ತೆರೆಯಲ್ಲಿ)

ವಾದ್ಯಗಳನ್ನು ದೂರವಿಡಿ. ಎಲೈ ಚರಾಚರ, ಮರ್ತ್ಯಾಮರ್ತ್ಯ ಜೀವಿಗಳೇ, ವಾಲ್ಮೀಕಿಮಹರ್ಷಿಗಳು ತೋರಿಸುವ ಈ ಪವಿತ್ರ ಆಶ್ಚರ್ಯವನ್ನು ಎಲ್ಲರೂ ನೋಡಿ, ನೋಡಿ.

ಲಕ್ಷ್ಮಣ (ನೋಡಿ)—

ಕಡೆದೊಲು ಗಂಗೆಯು ನೀರುಳ್ಕುವುದು
ಗಗನದೆ ನೆರೆದರು ದೇವರ್ಷಿಗಳು;
ಅಚ್ಚರಿ! ಅತ್ತಿಗೆ ಗಂಗೆಯು ಭೂಮಿಯು
ಜತೆಯೊಳೆ ನೀರಿಂದೇಳುವಳು. ೧೬

(ಮತ್ತೆ ತೆರೆಯಲ್ಲಿ)

ಓ ಅರುಂಧತಿ ಲೋಕವಂದ್ಯಳೆ
ಗಂಗೆ ಪೃಥ್ವಿಯರೆಮ್ಮಯ;
ಸಲಿಸು ವರವನು ನಿನಗೆ ಇತ್ತೆವು
ಪುಣ್ಯಾವಧುವನು ಸೀತೆಯ. ೧೭

ಲಕ್ಷ್ಮಣ—ಅಹಾ, ಆಶ್ಚರ್ಯ, ಆಶ್ಚರ್ಯ! ಆರ್ಯ, ನೋಡು, ನೋಡು. (ನೋಡಿ) ಅಯ್ಯೋ, ಆರ್ಯನು ಇನ್ನೂ ಎಚ್ಚೆತ್ತಿಲ್ಲ.

(ಅರುಂಧತಿ ಸೀತೆಯರ ಪ್ರವೇಶ)

ಅರುಂಧತಿ—

ಮಗಳೆ ನೀ ತ್ವರೆಮಾಡು ಜಾನಕಿ
ಬಿಟ್ಟು ನಾಚುವ ಗುಣವನು;
ಬಂದು ವತ್ಸನನಿನ್ನು ಬದುಕಿಸು
ಪ್ರೀತಿಹಸ್ತ ಸ್ಪರ್ಶದಿಂ. ೧೮

ಸೀತೆ (ಗಾಬರಿಯಿಂದ ನೇವರಿಸುತ್ತ)—ಆರ್ಯಪುತ್ರನು ಸಂತೈಸಿಕೊಳ್ಳಬೇಕು.

ರಾಮ (ಸಂತೈಸಿಕೊಂಡು, ಆನಂದದಿಂದ)—ಓ, ಇದೇನಿದು! (ನೋಡಿ, ಹರ್ಷ ಅದ್ಭುತಗಳಿಂದ) ಏನು, ದೇವಿಯೇ! (ನಾಚಿಕೆಯಿಂದ) ಅಹಾ, ತಾಯಿ ಅರುಂಧತಿ, ಋಷ್ಯಶೃಂಗ, ಶಾಂತೆ, ಮುಂತಾದ ಎಲ್ಲ ಹಿರಿಯರೂ ಸಂತೋಷಿಸುತ್ತಿದ್ದಾರೆ.

ಅರುಂಧತಿ—ವತ್ಸ, ಇದೋ ಪ್ರಸನ್ನಳಾಗಿ ಬಂದಿರುವ ಭಗೀರಥಕುಲದೇವತೆಯಾದ ಗಂಗೆ!

(ತೆರೆಯಲ್ಲಿ)

ಜಗತ್ಪತೇ, ರಾಮಚಂದ್ರ, ಚಿತ್ರದರ್ಶನಕಾಲದಲ್ಲಿ ನನ್ನನ್ನು ಕುರಿತು ನೀನು ಹೇಳಿದ್ದನ್ನು ನೆನೆಸಿಕೊ—'ಸೊಸೆಯಾದ ಸೀತೆಯ ವಿಷಯದಲ್ಲಿ ಅರುಂಧತಿ

ಯಂತೆ ನೀನೂ ಶುಭವನ್ನೇ ಹಾರೈಸುತ್ತಿರು' ಎಂದು. ಆ ಕೋರಿಕೆಯನ್ನು ನಾನು ಸಲ್ಲಿಸಿ ಈಗ ಪಾರಾಗಿದ್ದೇನೆ.

ಅರುಂಧತಿ—ಈಕೆ ನಿನ್ನ ಅತ್ತೆ—ಭಗವತಿ ವಸುಂಧರೆ.

(ಮತ್ತೆ ತೆರೆಯಲ್ಲಿ)

ಮಗಳನ್ನು ತೊರೆಯುವಾಗ ನೀನು ಹೇಳಿದ್ದೆ :—'ಭಗವತಿ, ಭೂಮಿತಾಯಿ, ಶ್ಲಾಘ್ಯಳಾದ ನಿನ್ನ ಮಗಳು ಜಾನಕಿಯನ್ನು ನೀನೇ ನೋಡಿಕೋ' ಎಂದು. ವತ್ಸನಾದ ನಿನ್ನ ಆ ಮಾತನ್ನು ಈಗ ನಡೆಸಿಕೊಟ್ಟಿದ್ದೇನೆ.

ರಾಮ—ಏನು, ಇಂತಹ ಮಹಾಪರಾಧವನ್ನು ಗೈದರೂ ದೇವತೆಯರು ಕರುಣೆ ದೋರಿದರೆ! ನಿಮ್ಮಿಬ್ಬರನ್ನೂ ನಮಸ್ಕರಿಸುವೆನು.

ಅರುಂಧತಿ—ಎಲೈ ಪೌರಜಾನಪದರೇ, ಇಂದು ಹೀಗೆ ದೇವತೆಗಳಾದ ವಸುಂಧರೆ ಜಾಹ್ನವಿಯರಿಂದಲೇ ಶ್ಲಾಘಿತಳಾಗಿ ನನಗೆ ಅರ್ಪಿತಳಾಗಿರುವ, ಹಿಂದೆಯೂ ಅಗ್ನಿದೇವನಿಂದಲೇ ನಿರ್ಣೀತ ಪುಣ್ಯಚಾರಿತ್ರಳಾದ, ಬ್ರಹ್ಮನೇ ಮೊದಲಾದ ಸಕಲ ದೇವತೆಗಳಿಂದಲೂ ಸಂಸ್ತುತಳಾದ, ಸೂರ್ಯಕುಲವಧುವಾದ, ದೇವಯಜನಸಂಭವೆಯಾದ, ಸೀತಾದೇವಿಯನ್ನು ಪರಿಗ್ರಹಿಸುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?

ಲಕ್ಷ್ಮಣ—ಆರ್ಯ, ಹೀಗೆ ಪೂಜ್ಯಳಾದ ಅರುಂಧತಿಯಿಂದ ನಿಂದಿತರಾದ ಪೌರಜಾನಪದರೂ, ಎಲ್ಲ ಜನಸಮುದಾಯವೂ, ಅತ್ತಿಗೆಯನ್ನು ನಮಸ್ಕರಿಸುತ್ತಿದ್ದಾರೆ; ಲೋಕಪಾಲರೂ ಸಪ್ತರ್ಷಿಗಳೂ ಪುಷ್ಪವೃಷ್ಟಿಯನ್ನು ಕರೆದು ಗೌರವಿಸುತ್ತಿದ್ದಾರೆ.

ಅರುಂಧತಿ—ಜಗತ್ಪತೇ, ರಾಮಚಂದ್ರ—

ಧರ್ಮಕನುಗುಣವಾಗಿ ಪ್ರಿಯಳನು<br>
ಧರ್ಮಚಾರಿಣಿಯಿವಳನು ;<br>
ಯಜ್ಞಕನುವಿಸು ಹೊನ್ನ ಪ್ರತಿಕೃತಿ-<br>
ಗೀಕೆ ಪುಣ್ಯಾ ಪ್ರಕೃತಿಯು. ೧೯

ಸೀತೆ (ಸ್ವಗತ)—ಸೀತೆಯ ದುಃಖವನ್ನು ಅಳಿಸಲು ಆರ್ಯಪುತ್ರನಿಗೆ ಗೊತ್ತೇ ಇದೆ.

ರಾಮ—ಭಗವತಿಯ ಅಪ್ಪಣೆ.

ಲಕ್ಷ್ಮಣ—ಕೃತಾರ್ಥನಾದೆ.

ಸೀತೆ—ಮತ್ತೆ ಬದುಕಿದೆ.

ಲಕ್ಷ್ಮಣ—ಆರ್ಯೆ, ಇದೋ ನಿರ್ಲಜ್ಜನಾದ ಲಕ್ಷ್ಮಣನು ನಮಸ್ಕರಿಸುತ್ತಾನೆ.

ಸೀತೆ—ನೀನಿರುವಂತೆಯೇ ಚಿರಕಾಲ ಬಾಳು.

ಅರುಂಧತಿ—ಪೂಜ್ಯ ವಾಲ್ಮೀಕಿಗಳೆ, ಸೀತಾಗರ್ಭಸಂಭವರಾದ ಮಕ್ಕಳು ಕುಶಲವರಿಬ್ಬರನ್ನೂ ಕರೆಸಿರಿ.

(ನಿಷ್ಕ್ರಮ)

ರಾಮಲಕ್ಷ್ಮಣರು—ಏನು ಅದೃಷ್ಟ! ಹಾಗೆಯೇ ಆಯಿತು.

ಸೀತೆ—ನನ್ನ ಇಬ್ಬರು ಕಂದಗಳೂ ಎಲ್ಲಿ?

(ಪ್ರವೇಶ—ವಾಲ್ಮೀಕಿ ಮತ್ತು ಕುಶಲವರು)

ವಾಲ್ಮೀಕಿ—ಮಕ್ಕಳೆ, ಕುಶಲವರೆ, ಇದೋ ನಿಮ್ಮ ತಂದೆ ರಘುಪತಿ! ಈ ಲಕ್ಷ್ಮಣನೇ ನಿಮ್ಮ ಚಿಕ್ಕಪ್ಪ. ಇವಳೇ ತಾಯಿ ಸೀತೆ. ಇದೋ ಮಾತಾಮಹನಾದ ರಾಜರ್ಷಿ ಜನಕ.

ಸೀತೆ—(ಹರ್ಷ, ಕರುಣ, ಅದ್ಭುತಗಳಿಂದ ನೋಡಿ). ಏನು, ತಂದೆಯೇ!

ಕುಶಲವರು—ಓ, ತಂದೆ, ಓ ತಾಯಿ, ಓ ಅಜ್ಜ!

ರಾಮಲಕ್ಷ್ಮಣರು—(ಹರ್ಷದಿಂದ ಆಲಿಂಗಿಸಿಕೊಂಡು) ಮಕ್ಕಳೆ, ಪುಣ್ಯದಿಂದ ನಿಮ್ಮ ಪ್ರಾಪ್ತಿಯಾಯಿತು.

ಸೀತೆ—ಬಾ ಕಂದ, ಲವ, ಬಾಪ್ಪಾ ಕುಶ. ಲೋಕಾಂತರಕ್ಕೆ ಹೊರಟು ಹೋಗಿದ್ದ ತಾಯನ್ನು ಕಡೆಗೊಮ್ಮೆ ಆಲಿಂಗಿಸಿರಿ.

ಕುಶಲವರು—(ಆಲಿಂಗಿಸಿ) ಇಬ್ಬರೂ ಧನ್ಯರಾದೆವು.

ಸೀತೆ—ಭಗವನ್, ಇದೋ ನಮಸ್ಕರಿಸುತ್ತೇನೆ.

ವಾಲ್ಮೀಕಿ—ವತ್ಸೆ, ಹೀಗೆಯೇ ಚಿರಕಾಲ ಬಾಳು.

ಸೀತೆ—ಓ, ತಂದೆಯವರು, ಕುಲಗುರುಗಳು, ಅತ್ತೆಯರು, ಪತಿಯೊಡನಿರುವ ಶಾಂತಾದೇವಿ, ಲಕ್ಷ್ಮಣ, ಸುಪ್ರಸನ್ನನಾಗಿರುವ ಆರ್ಯಪುತ್ರ, ಕುಶ ಲವರು ಎಲ್ಲರೂ ಒಟ್ಟಿಗೆ ಕಾಣುತ್ತಿದ್ದಾರೆ. ಆದ್ದರಿಂದ ಆನಂದದಿಂದ ತುಂಬಿದ್ದೇನೆ.

(ತೆರೆಯಲ್ಲಿ ಕಲಕಲ)

ವಾಲ್ಮೀಕಿ (ಎದ್ದು ನೋಡಿ)—ಲವಣಾಸುರನನ್ನು ನಿರ್ಮೂಲನಮಾಡಿ ಮಧುರೆಯ ದೊರೆ (= ಶತ್ರುಘ್ನ) ಬಂದಿರುವನು.

ಲಕ್ಷ್ಮಣ—ಶುಭಗಳು ಬರುವುದೇ ಪರಂಪರೆಯಾಗಿ.

ರಾಮ—ಎಲ್ಲವನ್ನೂ ನಾನು ಅನುಭವಿಸುತ್ತಲೇ ಇದ್ದರೂ ನಂಬಲಾರೆ ಅಥವಾ ಅಭ್ಯುದಯಗಳ ಸ್ವಭಾವವೇ ಹೀಗೆ.

ವಾಲ್ಮೀಕಿ—ರಾಮಭದ್ರ, ಹೇಳು, ನಿನಗೆ ಮತ್ತೇನು ಪ್ರಿಯವನ್ನು ಮಾಡಲಿ?

ರಾಮ—ಇದಕ್ಕಿಂತಲೂ ಇನ್ನು ಪ್ರಿಯವುಂಟೆ? ಆದರೂ ಇಂತಾಗಲಿ—

## ಭರತವಾಕ್ಯ

ಪಾಪಲೇಪವ ಕಳೆದು ಶುಭಗಳನೀವ ಪಾವನ ಕಥೆಯಿದು  
ಮಂಗಳಂ ಸುಮನೋಹರಂ ಭೂಮಾತೆಭಾಗೀರಥಿಗಳೊಲ್ ;  
ಅಭಿನಯೋಚಿತ ರೂಪನಾಂತಿದನಿಂದು ಸವಿಯಲಿ ವಿಬುಧರು  
ವಿದಿತ ಶಬ್ದಬ್ರಹ್ಮ, ಪರಿಣತಪ್ರಜ್ಞ, ಕವಿವರ ವಾಣಿಯಂ. ೨೦

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ 'ಸಮ್ಮೇಲನ' ಎಂಬ ಏಳನೆಯ ಅಂಕ ಮುಗಿದುದು

## ಅನುವಾದಕನ ಸಮಾಪ್ತಿವಾಕ್ಯ

ಉತ್ತರ ರಾಮ ಚರಿತ್ರೋ-
ಪಾತ್ತಂ ರಸಮುತ್ತಮೋತ್ತಮಂ ಕರುಣಮೆನಲ್
ಕತ್ತುರಿ ಕೂಡಿತ್ತೆನೆ ನುಡಿ-
ಮುತ್ತುಗಳಿಂ ಕೃಷ್ಣಮೂರ್ತಿ ಕನ್ನಡಿಸಿರ್ಪಂ ೧

ಭವಭೂತಿಯ ವಾಗ್ವಿಭವಂ
ನವನಾಟಕ ಸಂವಿಧಾನಕಲೆಯುಂ ರಸಮುಂ
ಭುವನಾತೀತಪ್ರತಿಭೆಯು
ಮಿವು ಕೃತಿಯಂ ಬುವಿಯೊಳಮರವೆನಿಸವೆ ನಿಜದಿಂ ೨

ಇವನೆ ಕವಿಯಿವನೆ ಪಂಡಿತ
ನಿವನೆ ಮಹಾಕವಿಯ ಪದವಿಗರ್ಹಂ ಬುವಿಯೊಳ್
ಸವಿ ತವದ ಕೃತಿಯನೋರೆಯು-
ಲ್ಕಿವನೊರ್ವನೆ ನೋಂತನೆಂದು ಬಣ್ಣಿಪರಧಿಕರ್ ೩

ವರಕರುಣಂ ಶೃಂಗಾರಂ
ಸುರುಚಿರಮೆನೆ ವೀರಮದ್ಭುತಂ ಪರಿಪಡಿಯಿಂ
ದೊರೆಕೊಳೆ ರಸವಿಸ್ತಾರಂ
ವಿರಚಿಸಿದಂ ರಾಮಚರಿತೆಯಂ ಪಾವನಮಂ ೪

ಕನ್ನಡ ನಾಟಕ ಲೋಕದೊ-
ಳುನ್ನತಿಯಂ ಪಡೆವುದಕ್ಕೆ ಭವಭೂತಿಯಶಂ
ಸನ್ನುತ ಸಂಸ್ಕೃತ ಮಧುವಂ
ಮನ್ನೆಯರಾದರಿಸಿ ಪಡೆಗೆ ಕೃತಕೃತ್ಯತೆಯಂ ೫

---

PRINTED BY K. A. KORULA AT THE WESLEY PRESS, MYSORE CITY

## ಈ ಲೇಖಕರ ಇತರ ಕೃತಿಗಳು

### ೧. ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ (ಮು

ಪ್ರಸಿದ್ಧ ಆಲಂಕಾರಿಕನಾದ ಆನಂದವರ್ಧನನ ಸಂಸ್ಕೃತ ಗ್ರಂಥದ ಕನ್ನಡದ ಅನು
ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳ ಮುನ್ನುಡಿಯಿಂದ ಅಲಂಕೃತವಾಗಿದೆ.

ಒಟ್ಟಿನ ಮೇಲೆ ಭಾಷಾಂತರವು ಬಹು ತೃಪ್ತಿಕರವಾಗಿರುವುದರಿಂದ ಇದನ್ನು
ಕನ್ನಡಿಗರು ಸಂಸ್ಕೃತದ ಮೂಲವನ್ನು ತಾವು ಓದಲಿಲ್ಲವಲ್ಲಾ ಎಂದು ಚಿಂತಿಸಬೇಕಾದದ್ದಿ

—ಮುನ್ನುಡಿಯಿಂದ.

### ೨. ಕನ್ನಡ ಕಾವ್ಯಾಲಂಕಾರ (ಮುಗಿದಿವೆ)

ಪ್ರಸಿದ್ಧ ಸಂಸ್ಕೃತ ಆಲಂಕಾರಿಕನಾದ ಭಾಮಹನ ಮೂಲಕೃತಿಯ ಕನ್ನಡದ ಅನು
ವಿಮರ್ಶಾತ್ಮಕವಾದ ಸುದೀರ್ಘ ಪೀಠಿಕೆ, ಮೂಲಶ್ಲೋಕಗಳು, ಕನ್ನಡದ ಅನುವಾದ, ವಿಪು
ಅಡಿ ಟಿಪ್ಪಣಿಗಳು, ದಂಡಿಯ ಕಾವ್ಯಾದರ್ಶದ ಮೊದಲ ಪರಿಚ್ಛೇದದ ಮೂಲ ಮತ್ತು ಅನುವಾ
ಇವೇ ಮೊದಲಾದ ಬಹು ವಿಷಯಗಳನ್ನೊಳಗೊಂಡ ದೊಡ್ಡ ಗ್ರಂಥ.

ಪುಟಗಳು lii+೧೭೬ ; ಬೆಲೆ, ಸಾಧಾರಣ ಪ್ರತಿ ರೂ. ೬-೦-೦ ; ಕ್ಯಾಲಿಕೊ ಪ್ರತಿ ರೂ. ೮

### ೩. ಕನ್ನಡ ಪ್ರತಿಮಾನಾಟಕ

ಭಾಸಕವಿಯ ನಾಟಕದ ಕನ್ನಡದ ಅನುವಾದ. ವಿಸ್ತಾರವಾದ ಪೀಠಿಕೆಯಿಂದ
ಗ್ರಂಥ. ಪ್ರತಿಯೊಬ್ಬ ಕನ್ನಡಿಗನೂ ಸಂಗ್ರಹಿಸಿಟ್ಟುಕೊಳ್ಳಬೇಕಾದ ಗ್ರಂಥ.

ಪುಟಗಳು lvi+೮೮ ; ಬೆಲೆ, ಸಾಧಾರಣ ಪ್ರತಿ ರೂ. ೨-೪-೦ ; ಕ್ಯಾಲಿಕೊ ಪ್ರತಿ ರೂ. ೩

### ೪. ಕನ್ನಡ ಕಿರಾತಾರ್ಜುನೀಯ

ಸಂಸ್ಕೃತ ಭಾಷೆಯಲ್ಲಿ ಪ್ರಖ್ಯಾತನಾದ ಮಹಾಕವಿ ಭಾರವಿಯ ಕಾವ್ಯದ
ಅನುವಾದ. ಪುಟಗಳು xlvii+೧೦೭ ; ಬೆಲೆ, ರೂ. ೨-೪-೦.

'ರಸಿಕ ಮಿತ್ರರೊಡನೆ ಸೇರಿ ಸಾಲುಗಳನ್ನಾರಿಸಿ ಸಲ್ಲಪಿಸುವುದಕ್ಕೆ ಈ ಭಾಷಾಂತರ
ಯೋಗ್ಯವಾಗಿದೆ ಎಂಬುದನ್ನು ನೀವೇ ಕಂಡಿದ್ದೀರಿ. ತಮ್ಮನ್ನೂ, ಡಾ. ಕೃಷ್ಣಮೂರ್ತಿಯವ
ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಕಥೆಯನ್ನು ಸಂಗ್ರಹಿಸಿರುವುದಂತೂ ಬಹು ಚೆನಾ
ಆದರ ಉಪೋದ್ಘಾತ ಪ್ರೌಢವಾಗಿದೆ.'

ಶ್ರೀ ಪು. ತಿ. ನರಸಿಂಹಾಚಾರ್.